ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್
'MUNJAVU' Kannada Weekly, KOPPA-CHM. ಫೋನ್ : 114
3ನೇ ವರ್ಷ 29ನೇ ಸಂಚಿಕೆ ಕೊಪ್ಪ 4-3-1990 ಭಾನುವಾರ ಬೆಲೆ 75 ಪೈಸೆ

# ನೀರಿನ ಪೂರೈಕೆ ಸುಧಾರಣೆಗೆ ಮನವಿ

ಕೊಪ್ಪ : ಇಲ್ಲಿನ ಭಾರತ್ ರೈಸ್‌ಮಿಲ್ ರಸ್ತೆಯಲ್ಲಿ ನೀರಿನ ಪೂರೈಕೆ ಉತ್ತಮಪಡಿಸುವಂತೆ ಸಾರ್ವಜನಿಕರು ಪುರಸಭೆಗೆ ಮನವಿ ಮಾಡಿದ್ದಾರೆ.

ಪುರಸಭೆ ಸದಸ್ಯ ಇಕ್ಬಾಲ್‌ಮನೆ ಎದುರಿನ ಬೀದಿ ನಲ್ಲಿಯವರೆಗೆ ಮಾತ್ರ ಈಗ ನೀರು ಬರುತ್ತಿದೆ ಅದರ ನಂತರದ ಬೀದಿ ನಲ್ಲಿಯಲ್ಲಿ ಫೆ 19 ರಿಂದ ನೀರು ಬರುವುದು ನಿಂತು ಹೋಗಿದೆ ಈಗ ಈ ಪ್ರದೇಶದ ಸುಮಾರು 200 ಮನೆಗಳವರು ಚಾರ್ಚ್‌ಕಲ್ ರಸ್ತೆಯಲ್ಲಿರುವ ಕಿರು ನೀರು ಸರಬರಾಜು ಯೋಜನೆಯ ನಲ್ಲಿಯೊಂದನ್ನೇ ಅವಲಂಬಿಸಬೇಕಾಗಿದ್ದು, ನೀರಿನ ತೀವ್ರ ಕೊರತೆಯೊಂದಿಗೆ ನೀರಿಗಾಗಿ ದಿನವೂ ಪರದಾಟದ ಜೊತೆಗೆ ಜಗಳ-ರಾದ್ಧಾಂತಗಳನ್ನೂ ಅನುಭವಿಸಬೇಕಾಗಿದೆ ಎಂದು ಮನವಿಯಲ್ಲಿ ತಿಳಿಸಿದ್ದಾರೆ.

### ಇಂದಿರಾ ನಗರದಲ್ಲಿ

ಅದೇ ಪ್ರದೇಶದ ಇಂದಿರಾ ನಗರದಲ್ಲೂ ನೀರಿನ ಕೊರತೆ ತೀವ್ರವಾಗಿದೆ ಅಲ್ಲಿರುವ ಪುರಸಭೆಯ ಬೋರ್‌ವೆಲ್ ಕೆಟ್ಟು, ಹಲವು ಬಾರಿ ಮನವಿ ಮಾಡಿದಾಗ್ಯೂ ರಿಪೇರಿಯಿಲ್ಲದೆ ಹಲವು ತಿಂಗಳುಗಳೇ ಆಗಿವೆ. ಈಚೆಗೆ ಅಲ್ಲಿನ ಕೆಳನೆಯ ರಸ್ತೆಗೆ ಹೊಸದಾಗಿ 2 ನಲ್ಲಿ ಹಾಕಿಸಿದಾಗ ನೀರಿನ ಬವಣೆ ನೀಗುವ ಆಸೆ ಮೂಡಿತ್ತು. ಆದರೆ ಅವುಗಳಲ್ಲಿ ನೀರು ಬಂದುದು 2 ದಿನ ಮಾತ್ರ. ಅರ್ಧ ಗಂಟೆಗೊಮ್ಮೆ ಅರ್ಧ ಕೊಡ ನೀರು ಒಸರುವ 'ಮೃತ' ಬೋರ್‌ವೆಲ್‌ಗೇ ಈಗ ಪುನಃ ನೇತುಬೀಳಬೇಕಾಗಿದೆ ಎಂದು ಅಲ್ಲಿನ ನೊಂದ ಮಹಿಳೆಯರು ತಿಳಿಸಿದ್ದಾರೆ

# "ನಾಟಾ ಕಳ್ಳ ಸಾಗಣೆ, ಕಾಡು ನಾಶ"

## —ಅರಣ್ಯ ಇಲಾಖೆ ಬಗ್ಗೆ ಶಾಸಕರ ಆಪಾದನೆ : ಒಂದು ಸಮೀಕ್ಷೆ

ಅರಣ್ಯ ಇಲಾಖೆಯಿಂದ ಸಾರ್ವಜನಿಕ ನಾಟಾ ಹರಾಜಿಗಾಗಿ ಪ್ರತಿವರ್ಷದಂತೆ ಎಲ್ಲಾ ಅರಣ್ಯ ವಲಯಗಳಲ್ಲಿ 'ಸತ್ತ, ಸಾಯುತ್ತಿರುವ ಮತ್ತು ಪೂರ್ಣ ಬೆಳೆದಿರುವ' ನಾಟಾ ಮರಗಳ ಕಡಿತಲೆ ಮತ್ತು ಸಂಗ್ರಹಣೆ ನಡೆಯುತ್ತಿದ್ದು, ಮೇಗೂರು ಬಳಿಯ ಯಡಗುಂದ ಕಾಡಿನಲ್ಲಿ ಈ ನೆಪದಿಂದ ತೀವ್ರವಾದ ಅರಣ್ಯ ನಾಶವಾಗಿರುವುದಲ್ಲದೆ, ಬಹಳಷ್ಟು ನಾಟ ಹೊರಕ್ಕೆ ಕಳ್ಳಸಾಗಣೆಯಾಗಿದೆ ಹಾಗೂ ಬೃಹತ್ ಪ್ರಮಾಣದಲ್ಲಿ ಅವ್ಯವಹಾರ ನಡೆದಿದೆ ಎಂದು ಶೃಂಗೇರಿ ಶಾಸಕ ಯು ಕೆ. ಶಾಮಣ್ಣ ಈಚೆಗೆ 'ಉದಯವಾಣಿ' ಪತ್ರಿಕೆಯ ಶಿವಮೊಗ್ಗದ ವರದಿಗಾರನಿಗೆ ನೀಡಿದ ಹೇಳಿಕೆಯಲ್ಲಿ ಆಪಾದಿಸಿದ್ದರು.

ಈ ಬಗ್ಗೆ ನಾ. 1 ರಂದು ಕುದುರೆಮುಖ ಎ. ಸಿ. ಎಫ್. ವಿಶ್ವನಾಥ್, ಶೃಂಗೇರಿ ವ| ಅರಣ್ಯಾಧಿಕಾರಿ ಮುನಿಸ್ವಾಮಿ ಮತ್ತು ಅಗಳಗಂಡಿ ಮಂಡಲ ಉಪ ಪ್ರಧಾನ (ಮೇಗೂರು ಪ್ರದೇಶದ ಸದಸ್ಯ) ರಂಗಣ್ಣ ಇವರುಗಳೊಂದಿಗೆ ಚಿಕ್ಕಮಗಳೂರಿನ 'ಜನ ಮಿತ್ರ' ದಿನ ಪತ್ರಿಕೆ ಉಪ ಸಂಪಾದಕ ದಿನೇಶ್ ಪಟವರ್ಧನ್ ಮತ್ತು ನಾನು ವ್ಯಾಪಕವಾಗಿ ಪರಿಶೀಲನೆ ನಡೆಸಿದೆವು

● ಸಿರಿಮನೆ ನಾಗರಾಜ್.

ಶೃಂಗೇರಿ ಅರಣ್ಯ ವಲಯದಲ್ಲಿ 5 ಕಡೆ ನಾಟಾ ಸಂಗ್ರಹ ನಡೆಯುತ್ತಿದ್ದು, ಯಡಗುಂದ ಅವುಗಳಲ್ಲೊಂದು. ಇದು ತುಂಗಭದ್ರಾ ಸ್ಟೇಟ್ ಫಾರೆಸ್ಟ್‌ನಲ್ಲಿದೆ. ಇಲ್ಲಿ 200 ವಿಂ. (ಸುಮಾರು 7000 ಘನ ಅಡಿ) ನಾಟ ಹಾಗೂ 400 ವಿಂ. ಸೌದೆ ಸಂಗ್ರಹಿಸಲು ನಿರ್ಧರಿಸಿ ಟೆಂಡರ್ ಕರೆದು, [illegible] ರಾ. ಪುರದ ಆರ್. ಸದಾನಂದ ಎಂಬ ಕಂಟ್ರಾಕ್ಟರ್‌ದಾರರೊಂದಿಗೆ 89ರ ಅಕ್ಟೋಬರ್ [illegible]ರಂದು ಕರಾರು ಆಗಿ ಅ. 24 ರಂದು ಕೆಲಸ (ಕೂಪ್) ವಹಿಸಿಕೊಡಲಾಗಿದೆ.

ಇಲ್ಲಿ ಅರಣ್ಯ ಇಲಾಖೆಯ ಅಂಕಿ-ಅಂಶದ ಪ್ರಕಾರ 162 ಮರ ಕಡಿದು, 597 [illegible]ಗಳನ್ನು ಮಾಡಿದೆ. ಒಟ್ಟು 337 ವಿಂ. ನಾಟ, 350 ವಿಂ. ಸೌದೆ ತಯಾರಾಗಿದೆ 220 ವಿಂ. ನಾಟ (396 ದಿಮ್ಮಿ) ಶೃಂಗೇರಿ ಡಿಪೋಗೆ ಬಂದಿದ್ದು, ಇನ್ನೂ [illegible] ದಿಮ್ಮಿಗಳು ಕಾಕಿನಲ್ಲಿವೆ. ಈ ಮರಗಳೆಲ್ಲ ಮೇ-ಜರ್ನಲ್ಲಿ ನಂಬರ್ ಹಾಕಿ ಲೆಕ್ಕ ತೆಗೆದುಕೊಳ್ಳಲಾಗಿತ್ತು.

ಅಲ್ಲದೆ, ಕಳೆದ ಸೆಪ್ಟೆಂಬರ್ ಬಿರುಗಾಳಿಯಲ್ಲಿ ಬಿದ್ದ ಮರಗಳನ್ನು ಇಲಾಖೆಯ ವತಿಯಿಂದ ಸಂಗ್ರಹಿಸುವ ಕೆಲಸವನ್ನೂ ಈ ಕೂಪಿನಲ್ಲಿ ಕೈಗೊಂಡು (ಅದೇ ಕಂಟ್ರಾಕ್ಟರ ಕಾರ್ಮಿಕ ಬಲದೊಂದಿಗೆ), 87 ಮರಗಳಿಂದ (195 ದಿಮ್ಮಿ) 104 ವಿಂ. ನಾಟ 88 ವಿಂ. ಸೌದೆ ಮಾಡಿಸಲಾಗಿದೆ.

### ಸಂಶಯಗಳು

ಆದರೆ ಈ ಯಾವ ಅಂಕಿ-ಅಂಶಗಳೂ ಸಾರ್ವಜನಿಕರಿಗಾಗಲಿ, ಮಂಡಲ ಪಂಚಾಯತಿಗಾಗಲಿ ತಿಳಿದಿರಲಿಲ್ಲ. ಹಸಿ ಮರಗಳೂ ಕಡಿಯಲ್ಪಡುತ್ತಿದ್ದವು, ರಾತ್ರಿ ರಾತ್ರಿಯಲ್ಲೂ ಲಾರಿಗಳ ಓಡಾಟ ಇವೆಲ್ಲದರಿಂದ ಶಂಕೆಗೊಂಡ ಕೆಲವರು ಮಂಡಲ ಪ್ರಧಾನರಾದ ಕೆ. ಸಿ. ಸತೀಶ್‌ರಿಂದ ಸಮಜಾಯಿಷಿ ಬಯಸಿದರು. ಅವರು ಶೃಂಗೇರಿ ವಲಯ ಅರಣ್ಯಾಧಿಕಾರಿಗಳಲ್ಲಿ ವಿಚಾರಿಸಿದಾಗ, ಒಂದು ವಾರದಲ್ಲಿ ಲೆಕ್ಕ ಕೊಡುತ್ತೇನೆಂದವರು ಇನ್ನೂ ಕೊಟ್ಟಿಲ್ಲ ಎನ್ನುತ್ತಾರೆ.

ಅಲ್ಲದೆ ದಯಂಬಳ್ಳಿ ಗ್ರಾಮದ ಮಂಗರ ಎಂಬ ಹರಿಜನ ವ್ಯಕ್ತಿ ದರ್ಖಾಸ್ತ್ ಕೇಳಿದ್ದ ಜಾಗದಲ್ಲಿ ಕಡಿಯಲಾಗಿದ್ದ ಒಂದು ಹಸಿ ಮರದ ಬಗೆಗೂ ತಾನು ವಿಚಾರಿಸಿದಾಗ, ಅಂಥ ಯಾವ ಮರವನ್ನೂ ತಾವು ಕಡಿದಿಲ್ಲವೆಂದ ಅರಣ್ಯ ಸಿಬ್ಬಂದಿ, ಕೇವಲ 2-3 ದಿನದಲ್ಲಿ ತನಗೆ ತಿಳಿಸದೆಯೇ ಆ ಮರವನ್ನು ಸಾಗಿಸಿದ್ದು, ಹಾಗೂ ರೇಂಜರೇ ತಮ್ಮ ತಮ್ಮನ ಹೆಸರಲ್ಲಿ ಕಂಟ್ರಾಕ್ಟ್ ಮಾಡುತ್ತಿರುವುದು—ಇವೆಲ್ಲ ತನಗೆ ಅನುಮಾನ ಹುಟ್ಟಿಸಿತೆನ್ನುತ್ತಾರೆ.

### ಆರೋಪಗಳು

ಹೀಗಾಗಿ, 1) ಯಡಗುಂದದಲ್ಲಿ ಲೆಕ್ಕವಿಲ್ಲದಷ್ಟು ಮರ ಕಡಿತಲೆಯಾಗಿ, ಸಿಕ್ಕಾಪಟ್ಟೆ ಕಾಡು ನಾಶವಾಗಿದೆ; 2) ಈ ನಾಟ ರಾತ್ರೋ ರಾತ್ರಿ ಸಾಗಣೆಯಾಗಿ, ಹೊರಗೆಲ್ಲೋ ಹೋಗಿ ಅಕ್ರಮ ನಡೆದಿದೆ; ಹಾಗೂ 3) ಟಿಂಬರ್ ಕಂಟ್ರಾಕ್ಟರ್‌ಗೆ ಅನುಕೂಲವಾಗಲೆಂದು ಸತ್ತ, ಬಿದ್ದ ಮರಗಳ ಜೊತೆ ಹಸಿ ಮರಗಳನ್ನೇ ಕಡಿಯಲು ಅವಕಾಶ ನೀಡಲಾಗಿದೆ—ಇವೇ ಮುಂತಾದ ಆರೋಪಗಳೊಂದಿಗೆ ಶಾಸಕರಿಗೆ ದೂರು ಹೋಯಿತು

### ಶಾಸಕರಿಂದ ಮಾಹಿತಿ ಕೇಳಿಕೆ

ಶಾಸಕರು ಶೃಂಗೇರಿ ತಾ. ಪಂ. ಸಮಿತಿ ಸಭೆಯಲ್ಲಿ ವಲಯ ಅರಣ್ಯಾಧಿಕಾರಿಗಳನ್ನು ಈ ಬಗ್ಗೆ ನೇರವಾಗಿ ಕೇಳದೆ ಬಳಸು ಪ್ರಶ್ನೆಗಳಲ್ಲಿ ಮಾಹಿತಿ ಪಡೆಯಲು ಯತ್ನಿಸಿದಾಗ, ಈ ವಿಷಯ ತಾ|| ಪಂ ಸ. ಸಭೆಯ ವ್ಯಾಪ್ತಿಯದಲ್ಲವಾಗಿ ಅಂಕಿ-ಅಂಶಗಳನ್ನು ತಕ್ಷಣ ಕೊಡಲಾಗಲಿಲ್ಲವೆಂದೂ, ಆದರೆ ಸುಮಾರು 'ಮುನ್ನೂರು ಚಿಲ್ಲರೆ' ಮೀಟರ್ ನಾಟ ಕಡಿದಿರುವುದಾಗಿಯೂ, ಮುಂದಿನ ಸಭೆಯೊಳಗೆ ಪೂರ್ತಿ ವಿವರ ನೀಡುವುದಾಗಿ ತಿಳಿಸಿದ್ದಾಗಿ ಯೂ ರೇಂಜರ್ ಹೇಳುತ್ತಾರೆ."ಹಾಗೆ ಹೇಳಲಿಲ್ಲ. ಇದನ್ನೆಲ್ಲ ಕನ್ಸರ್ವೇಟರರಿಂದ ಪಡೆಯುವಂತೆ ತಿಳಿಸಿದರು" ಎಂದು ಕಾಂಗ್ರೆಸ್ ಕಾರ್ಯಕರ್ತರ ಹೇಳಿಕೆ.

ಫೆಬ್ರುವರಿ ಮೊದಲ ವಾರದ ಕೊಪ್ಪ ತಾ. ಪಂ. ಸ. ಸಭೆಯಲ್ಲೂ ಶಾಮಣ್ಣ ಕೊಪ್ಪ ರೇಂಜರಿಂದ ಈ ಮಾಹಿತಿ ಕೇಳಿದಾಗ, ಅದು ಶೃಂಗೇರಿ ವಲಯದ್ದಾದ್ದರಿಂದ ದೊರೆತಿಲ್ಲ. ಆದರೆ ಅವರು ಮಂಡಲ ಪ್ರಧಾನರ ಪ್ರಶ್ನೆ-ಆರೋಪಗಳಿಂದ ರೋಸಿ, ಮಾಹಿನ ಚಕಮಕಿ ನಡೆದಿದೆ.

### ಪರಿಶೀಲನೆ

ನಂತರ, ಫೆ. 8ರಂದು ಶಾಮಣ್ಣ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಈ ವಿಚಾರ ತಿಳಿಸಿ, ಪರಿಶೀಲಿಸಲು ತಿಳಿಸಿದಾಗ ,9ರಂದು ಡಿಎಫ್ಒ ಮಂಡಲ ಪ್ರಧಾನರೊಂದಿಗೆ ಕಾಡಿಗೆ ತೆರಳಿ ಅನೂಲಾಗ್ರ ತನಿಖೆ ನಡೆಸಿ, ಯಾವುದೇ ಅಕ್ರಮ, ಕಾನೂನು ಉಲ್ಲಂಘನೆ ನಡೆದಿಲ್ಲ ಎಂದು ಮನಗಂಡು ನಂತರ ಶಾಸಕರಿಗೂ ಈ ವಿಷಯ ತಿಳಿಸಿದ್ದಾರೆ. ಆದಾಗ್ಯೂ ಶಾಸಕರು ಸ್ಥಳ ಪರಿಶೀಲನೆಗೆ ಬರುವುದಾದರೆ ಪೂರ್ಣ ವಿವರ ಮತ್ತು ಸಮಜಾಯಿಷಿ ನೀಡುವುದಾಗಿ ತಿಳಿಸಿದ್ದಾರೆ. ಅದರೆ ಆ ನಂತರದ ವಾರದಲ್ಲಿ ಅರಣ್ಯ ಸಿಬ್ಬಂದಿಯ

(6ನೇ ಪುಟಕ್ಕೆ)

## ಓದುಗರಲ್ಲಿ ವಿನಂತಿ

1. ಚಂದಾ ಸಂಗ್ರಹಣೆ ಪ್ರವಾಸದ ನಿಮಿತ್ತ, ತಾ|| 11-3-90ರ ಸಂಚಿಕೆ ಪ್ರಕಟವಾಗುವುದಿಲ್ಲ.

2. ಮುದ್ರಣದ ವೇಳೆ ಕಣ್ತಪ್ಪಿನಿಂದಾಗಿ ಈ ಸಂಚಿಕೆಯ 2 ಮತ್ತು 5ನೇ ಪುಟಗಳು ತಿರುವುಮುರುವಾಗಿವೆ. ಕ್ರಮವಾಗಿ ಓದಿಕೊಳ್ಳಲು ವಿನಂತಿ. —ಸಂ.

## ಚಂದಾದಾರರಲ್ಲಿ ವಿನಂತಿ

ಚಂದಾ ಸಂಗ್ರಹಕ್ಕಾಗಿ ಚಂದಾದಾರರ ಮನೆಗೆ ಹೋದಾಗ ಕೆಲವೆಡೆ ಮನೆಯ ಯಜಮಾನರು ಇರುವುದಿಲ್ಲ; ಅಥವಾ ಅನಂತರ ಕಳಿಸುವುದಾಗಿ ಹೇಳುತ್ತಾರೆ. ಅಥವಾ ಕೆಲವು ಕಡೆ ಭೇಟಿ ಕೊಡುವುದು ನನಗೆ ಸಾಧ್ಯವಾಗಿರುವುದಿಲ್ಲ. ಹೀಗಾಗಿ ಹಲವಾರು ಚಂದಾದಾರರ ಚಂದಾ ಹಣ ಬಾಕಿಯಾಗುತ್ತದೆ.

ಆದರೆ, ಅಂಥವರು ಮೊದಲಿನ ಕೆಲವು ವರ್ಷ ಕ್ರಮವಾಗಿ ಚಂದಾ ಕೊಟ್ಟವರಾಗಿರುವುದರಿಂದ, ಕೇವಲ ಚಂದಾ ಬಾಕಿಗಾಗಿ ತಕ್ಷಣ ಪತ್ರಿಕೆ ನಿಲ್ಲಿಸುವುದು ಅವರಿಗೆ ಅವಮಾನಕರವೆಂದು ಸನಗನ್ನಿಸುವ ಕಾರಣ ಪತ್ರಿಕೆ ಮುಂದುವರಿಸಿದ್ದೇ, ಇಂಥ ಬಾಕಿ ಈಗ ಸಾಕಷ್ಟು ದೊಡ್ಡ ಪ್ರಮಾಣಕ್ಕೆ ಬೆಳೆದಿದೆ.

ಆದರೆ ಕಾಗದದ ಬೆಲೆ, ಅಂಚೆ ದರ ಹುತ್ತಿತರ ಮುದ್ರಣ ವೆಚ್ಚಗಳು ಕಳೆದ 2 ವರ್ಷಗಳಲ್ಲಿ ಸಣ್ಣ ಪತ್ರಿಕೆಗಳನ್ನು ಜೀವ ಸಹಿತ ಹಿಂಡುತ್ತಿವೆ. ಇದರಿಂದಾಗಿ, ಸಕಲ ಪತ್ರಿಕೆಗಳ ಹೊರತಾ ವೃತ್ತಿ ನಿಷ್ಠ ಪತ್ರಿಕೆಗಳು ಬದುಕಿ ಉಳಿಯುವುದೇ ಅಸಾಧ್ಯವಾಗಿದೆ. ಇದರ ಮೇಲೆ ದೊಡ್ಡ ಪ್ರಮಾಣದ ಚಂದಾ ಬಾಕಿಯೂ ಸೇರಿದರೆ, "ಸಣ್ಣ ಪತ್ರಿಕೆಗಳು ಉಳಿಬೇಕು" ಎಂಬ ಕೇಂದ್ರ-ರಾಜ್ಯ ಸರ್ಕಾರಗಳ ಆಸೆಯ ಉದ್ದೇಶಕ್ಕೆ ನೀವೂ ಸಹಕರಿಸಿದಂತಾಗುತ್ತದೆ.

ಆದ್ದರಿಂದ ಎಲ್ಲಾ ಚಂದಾದಾರರೂ ತಾವು ಮನೆಯಲ್ಲಿಲ್ಲದಿದ್ದರೂ ಚಂದಾ ಹಣಕ್ಕೆ ವ್ಯವಸ್ಥೆ ಮಾಡಿರಬೇಕೆಂದೂ, ಹೆಚ್ಚೆಂದರೆ 75-100ರೂ.ಗಳೊಳಗಿನ ತಮ್ಮ ಈ ಬಾಕಿಗಳನ್ನು ಕೂಡಲೇ ಚುಕ್ತಾ ಮಾಡಬೇಕೆಂದೂ ಕೋರುತ್ತೇನೆ. ಇದರಿಂದ ಪತ್ರಿಕೆಯನ್ನು ಕನಿಷ್ಠ ಹಕ್ಕ ನಷ್ಟವಾದರೂ ಇಲ್ಲದಂತೆ ನಡೆಸಲು ಸಾಧ್ಯವಾಗುತ್ತದೆ.

ಚಂದಾ ಹಣ ಕೊಡಲು ಇಷ್ಟವಿಲ್ಲದವರು ಅಥವಾ ಪತ್ರಿಕೆ ಪಡೆಯಲು ಆಸಕ್ತಿಯಿಲ್ಲದವರು ತಕ್ಷಣ ತಿಳಿಸಬೇಕು. ಅದರ, 'ಕೊಡುತ್ತೇನೆ' ಅಥವಾ 'ಮತ್ತೆ ಕಳಿಸುತ್ತೇನೆ' ಎಂದು ಹೇಳಿ ದಯವಿಟ್ಟು ಉದಾಸೀನ ಮಾಡಬೇಡಿ.

—ಸಿರಿಮನೆ ನಾಗರಾಜ್

# ವಜ್ರದ ಹಬ್ಬ ಆಚರಿಸುತ್ತಿರುವ ಭೂ ಬ್ಯಾಂಕ್‌ಗಳು

ಕೊಪ್ಪ : ಈ ತಾಲ್ಲೂಕಿನಲ್ಲಿರುವ ಎರಡು ಭೂ ಅಭಿವೃದ್ಧಿ ಬ್ಯಾಂಕ್‌ಗಳಾದ ಕೊಪ್ಪ ಮತ್ತು ಕರಿಮನೆಯ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್‌ಗಳು ಈ ವರ್ಷ ವಜ್ರಮಹೋತ್ಸವ ಆಚರಿಸುತ್ತಿವೆ.

ರಾಜ್ಯದ ಮೊದಲ ದರ್ಜೆಯ ಬ್ಯಾಂಕುಗಳೆಂಬ ಹೆಗ್ಗಳಿಕೆಗೆ ಪಾತ್ರವಾಗಿ, ಕಳೆದ ಹಲವು ವರ್ಷಗಳಿಂದ ಸತತವಾಗಿ ಲಾಭಗಳಿಸುತ್ತಿರುವುದಲ್ಲದೆ, ಸಾಲ ನೀಡಿಕೆ ಮತ್ತು ವಸೂಲಾತಿಗಳಲ್ಲೂ ಉತ್ತಮ ಸ್ಥಾನ ಕಾಯ್ದುಕೊಂಡು ಬರುತ್ತಿರುವ ಈ ಬ್ಯಾಂಕ್‌ಗಳು, ವಜ್ರಮಹೋತ್ಸವದ ಈ ವಿಶಿಷ್ಟ ಸಂದರ್ಭಕ್ಕಾಗಿ ಹಲವು ಯೋಜನೆಗಳನ್ನೂ ಹಮ್ಮಿಕೊಂಡಿವೆ.

ಕೊಪ್ಪ ಬ್ಯಾಂಕ್‌ನ ವಜ್ರಮಹೋತ್ಸವವನ್ನು ಏಪ್ರಿಲ್ ಅಂತ್ಯದೊಳಗೆ ಆಚರಿಸಲು ಫೆ. 17 ರಂದು ನಡೆದ ಕಾರ್ಯಕಾರಿ ಮಂಡಳಿ ಸಭೆ ತೀರ್ಮಾನಿಸಿದ್ದು, ಇದಕ್ಕಾಗಿ ವಜ್ರಮಹೋತ್ಸವ ಸಮಿತಿಯೊಂದನ್ನು ರಚಿಸಲಾಗಿದೆ. ಈ ಸಂದರ್ಭದ ಸವಿನೆನಪಿಗಾಗಿ ಸ್ಮರಣ ಸಂಚಿಕೆಯೊಂದನ್ನೂ ಸಹ ಹೊರ ತರಲು ಉದ್ದೇಶಿಸಲಾಗಿದೆ.

ಕರಿಮನೆ ಬ್ಯಾಂಕು ಇಡೀ 1990 ರ ವರ್ಷವನ್ನು ವಜ್ರಮಹೋತ್ಸವ ವರ್ಷವನ್ನಾಗಿ ಆಚರಿಸಲಿದ್ದು, ಈ ಅವಧಿಯಲ್ಲಿ ಸಾಲ ಸೌಲಭ್ಯಗಳ ಹಲವು ಹೊಸ ಯೋಜನೆಗಳನ್ನು ಜಾರಿಗೆ ತರಲಾಗುತ್ತಿದೆ. ಅಲ್ಲದೆ, ಡಿಸೆಂಬರ್ ತಿಂಗಳಲ್ಲಿ ವಜ್ರಮಹೋತ್ಸವ ವರ್ಷದ ಸಮಾರೋಪ ಸಮಾರಂಭವನ್ನೂ ಏರ್ಪಡಿಸಲಾಗುವುದು.

### ವಜ್ರಮಹೋತ್ಸವ ವರ್ಷದ ಪ್ರಾರಂಭೋತ್ಸವ

(ವರದಿ : ಶಂ. ನ. ಶೇಷಗಿರಿ)

ಬ್ಯಾಂಕಿನ ವಜ್ರಮಹೋತ್ಸವ ವರ್ಷದ ಉದ್ಘಾಟನಾ ಸಮಾರಂಭ ಜಯಪುರದಲ್ಲಿ ಫೆ. 28 ರಂದು ಶಾಸಕ ಯು ಕೆ. ಶಾಮಣ್ಣನವರ ಅಧ್ಯಕ್ಷತೆಯಲ್ಲಿ ನಡೆಯಿತು. ಶಾಸಕರು ನೌಕರರ ವಸತಿ ಗೃಹವನ್ನೂ ಉದ್ಘಾಟಿಸಿದರು.

ಮಾಜಿ ಸಚಿವ ಗೋವಿಂದಗೌಡರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಜಿ. ಪ. ಸದಸ್ಯ ಬಿ.ಜಿ. ಚಿದಂಬರ್ ವಜ್ರ ಮಹೋತ್ಸವದ ಪ್ರಾರಂಭೋತ್ಸವ ನೆರವೇರಿಸಿದರು. ರಾಜ್ಯ ಕೃಷಿ ಬ್ಯಾಂಕಿನ ಜಿಲ್ಲಾ ನಿರ್ದೇಶಕ ಡಿ.ಸಿ. ದಿವಾಕರ್ ರೈತರಿಗೆ ಸಾಲದ ಚೆಕ್‌ಗಳನ್ನು ವಿತರಿಸಿದರು.

ಬ್ಯಾಂಕ್ ವ್ಯಾಪ್ತಿಯ ಪ್ರೌಢಶಾಲೆಗಳಲ್ಲಿ ಎಸ್‌ಎಸ್‌ಎಲ್‌ಸಿಯಲ್ಲಿ ಹೆಚ್ಚು ಅಂಕ ಪಡೆದ ರೈತ ಮಕ್ಕಳಿಗೆ ಜಿಲ್ಲಾ ಬ್ಯಾಂಕ್ ಅಧ್ಯಕ್ಷ ಕೆ.ಎಂ. ಶ್ರೀನಿವಾಸ್ ಬಹುಮಾನ ವಿತರಿಸಿದರು. ರೈತರ ಪರವಾಗಿ ಶ್ರೀನಿವಾಸ ಶರ್ಮ ಮಾತನಾಡಿದರು. ಬಿ. ಕೆ. ಪುಟ್ಟಸ್ವಾಮಿ, ಚನ್ನೇಗೌಡ, ಎಚ್. ಎಂ. ಮಾಸ್ತಿ ಮುಖ್ಯ ಅತಿಥಿಗಳಾಗಿದ್ದರು.

ಅಧ್ಯಕ್ಷ ಬಿ. ಎಂ. ಸದಾನಂದ ಸ್ವಾಗತಿಸಿ, ಕಾರ್ಯದರ್ಶಿ ವರದಿ ನೀಡಿದರು. ಉಪಾಧ್ಯಕ್ಷ ಎಚ್. ಟಿ. ರತ್ನಾಕರ ಸಂದೇಶ ಓದಿದರು. ನಿರ್ದೇಶಕ ಎ.ಸಿ. ವಜ್ರಪ್ಪ ವಂದಿಸಿದರು. ಮಾಜಿ ಅಧ್ಯಕ್ಷ ಡಾ|| ಯು ಎಸ್. ರೋಗಪ್ಪ ಕಾರ್ಯಕ್ರಮ ನಿರ್ವಹಿಸಿದರು

---

ಬಿಂ. ಮಂ. ಪಂ ಸಂ. : 19/89-90 ಬಿಂತ್ರವಳ್ಳಿ ಮಂಡಲ ಪಂಚಾಯಿತಿ ಕಾರ್ಯಾಲಯ, ಕೊಪ್ಪ ತಾ. 24-2-1990

## ಹರಾಜು ಇಸ್ತಿಹಾರ್

**ಈ ಮೂಲಕ ಸಮಸ್ತ ಜನಗಳಿಗೂ ತಿಳಿಸುವುದೇನೆಂದರೆ :**

ಈ ಪಂಚಾಯಿತಿ ವ್ಯಾಪ್ತಿಯ ಬಿಂತ್ರವಳ್ಳಿ ಗ್ರಾಮದ ಬಾಳಗಡಿಯಲ್ಲಿ ಕೊಪ್ಪ-ಮೇಲ್ಪಾಲ್-ಬಾಳೆಹೊನ್ನೂರು ರಸ್ತೆಯ ಎಡಭಾಗದಲ್ಲಿ ಇರುವ ಮಾಂಸದ ಮಾರಾಟದ ಮಳಿಗೆಯಲ್ಲಿ ದಿನಾಂಕ: 1-4-1990ರಿಂದ 31-3-93ರವರೆಗೆ 3 ವರ್ಷಗಳ ಅವಧಿಗೆ ಕುರಿ, ಆಡು ಮಾಂಸ ಮಾರಾಟ ಮಾಡುವ ಹಕ್ಕನ್ನು ದಿನಾಂಕ : 26-3-1990ರಂದು ಸೋಮವಾರ ಬೆಳಿಗ್ಗೆ 10-30 ಘಂಟೆಗೆ ಸರಿಯಾಗಿ ಮಂಡಲ ಪಂಚಾಯಿತಿ ಕಾರ್ಯಾಲಯದಲ್ಲಿ ಪ್ರಧಾನರಿಂದ ಅಥವಾ ಅವರಿಂದ ಅಧಿಕಾರ ಪಡೆದವರಿಂದ ಬಹಿರಂಗವಾಗಿ ಹರಾಜು ನಡೆಸಲಾಗುವುದು. ಇಷ್ಟವುಳ್ಳವರು ಛಡ ಸವಾಲಿನಲ್ಲಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಭಾಗವಹಿಸಬಹುದಾಗಿರುತ್ತೆಂಬುದಾಗಿ ಈ ಮೂಲಕ ಪ್ರಚುರಪಡಿಸಿದೆ.

**ಷರತ್ತುಗಳು**

1. ಬಿಡ್‌ದಾರರು ಹರಾಜಿಗಿಂತ ಮೊದಲು ಮಂಡಲ ಪಂಚಾಯಿತಿಯಲ್ಲಿ 200 ರೂಪಾಯಿಗಳನ್ನು ನಗದಾಗಿ ಠೇವಣಿ ಜಮಾ ಮಾಡತಕ್ಕದ್ದು.
2. ಹರಾಜಿನಲ್ಲಿ ಭಾಗವಹಿಸುವವರು ಈ ಮಂಡಲ ಪಂಚಾಯಿತಿಗೆ ಹಿಂದಿನ ಬಾಡಿಗೆ ವಗೈರೆ ಬಾಕಿದಾರರಾಗಿರುವವರು ಅರ್ಹರಾಗಿರುವುದಿಲ್ಲ.
3. ಆಖೈರು ಬಿಡ್‌ದಾರರು 3 ವರ್ಷದ ಅವಧಿಗೆ ಮಾತ್ರ ಸದರಿ ಕಟ್ಟಡದಲ್ಲಿ ಮಾಂಸದ ವ್ಯಾಪಾರವನ್ನು ನಡೆಸಲು ಹಕ್ಕನ್ನು ಪಡೆದವರಾಗಿದ್ದು ಅವಧಿ ಮುಕ್ತಾಯವಾದ ತಕ್ಷಣವೇ ಪಂಚಾಯ್ತಿಗೆ ಕಟ್ಟಡವನ್ನು ವಹಿಸಿಕೊಡಲು ಬದ್ಧರಾಗಿರತಕ್ಕದ್ದು.
4. ಬಿಡ್‌ದಾರರು ಮಾಹೆಯಾನ ಬಾಡಿಗೆಯಾಗಿ ಬಿಡ್ ಮಾಡಬಹುದಾಗಿರುತ್ತೆ
5. ಆಖೈರು ಬಿಡ್‌ದಾರರ ಠೇವಣಿ ವಿನಹ ಉಳಿದವರ ಠೇವಣಿ ಹಣವನ್ನು ಹರಾಜು ಮುಕ್ತಾಯದ ನಂತರ ಮರು ಪಾವತಿ ಮಾಡಲಾಗುವುದು.
6. ಆಖೈರು ಬಿಡ್‌ದಾರರು 6 ತಿಂಗಳ ಬಾಡಿಗೆಯ ಮೊಬಲಗನ್ನು ಹರಾಜು ಮುಗಿದ ಕೂಡಲೇ ಪಂಚಾಯ್ತಿಗೆ ಠೇವಣಿಯಾಗಿ ಜಮಾ ಮಾಡತಕ್ಕದ್ದು. ಮತ್ತು ಪಂಚಾಯ್ತಿಯು ವಿಧಿಸುವ ಷರತ್ತುಗಳಿಗೆ ಬದ್ಧರಾಗಿರುವುದಾಗಿ 10 ರೂ ಛಾಪಾ ಕಾಗದದಲ್ಲಿ ಕರಾರನ್ನು ಬರೆದುಕೊಡಲು ಬದ್ಧರಾಗಿರತಕ್ಕದ್ದು. ತಪ್ಪಿದಲ್ಲಿ ದುಬಾರಾ ಹರಾಜು ಮಾಡಲಾಗುವುದು. 2ನೇ ಬಾರಿ ಹರಾಜಿನಲ್ಲಿ ನಷ್ಟ ಸಂಭವಿಸಿದಲ್ಲಿ ಮೊದಲನೆ ಹರಾಜಿನ ಆಖೈರು ಬಿಡ್‌ದಾರರ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. 2ನೇ ಹರಾಜಿನಲ್ಲಿ ಲಾಭ ಬಂದಲ್ಲಿ ಮೊದಲನೆ ಹರಾಜಿನ ಆಖೈರು ಬಿಡ್‌ದಾರರಿಗೆ ಲಾಭಾಂಶ ಕೇಳುವ ಹಕ್ಕು ಇರುವುದಿಲ್ಲ.
7. ಹರಾಜು ಮುಗಿದ ಕೂಡಲೇ ಪಂಚಾಯಿತಿಗೆ ಜಮಾ ಮಾಡುವ 6 ತಿಂಗಳ ಬಾಡಿಗೆ ಮೊಬಲಗನ್ನು 3ನೇ ವರ್ಷದ ಕೊನೆಯಲ್ಲಿ ಮಾಸಿಕ ಬಾಡಿಗೆಯ ಕಂತುಗಳಿಗೆ ಜಮಾ ಮಾಡಿಕೊಳ್ಳಲಾಗುವುದು. ಡಿಪಾಸಿಟ್ ಮಾಡಲ್ಪಟ್ಟ ಹಣಕ್ಕೆ ಬಡ್ಡಿಯನ್ನು ಕೊಡಲು ಅವಕಾಶವಿರುವುದಿಲ್ಲ
8. ಹರಾಜುದಾರರು ಹಾಲೀ ಇರುವ ಕಟ್ಟಡಕ್ಕೆ ಜೋಡಣೆ ಬದಲಾಯಿಸುವಿಕೆ ಯಾವುದನ್ನು ಮಾಡಲು ಅವಕಾಶವಿರುವುದಿಲ್ಲ.
9. ಹರಾಜುದಾರರು ಬಾಡಿಗೆ ಮೊಬಲಗನ್ನು ಪ್ರತಿ ತಿಂಗಳ 5ನೇ ತಾರೀಖಿನ ಒಳಗಾಗಿ ಮಂಡಲ ಪಂಚಾಯ್ತಿಗೆ ಜಮಾ ಮಾಡತಕ್ಕದ್ದು.
10. ಹರಾಜು ಮಂಜೂರಾತಿಯು ಮಂಡಲ ಪಂಚಾಯಿತಿಯ ಸಭೆಯ ತೀರ್ಮಾನಕ್ಕೆ ಒಳಪಟ್ಟಿರುತ್ತೆ.
11. ಹರಾಜುದಾರರು ನಿರ್ದಿಷ್ಟಪಡಿಸಿದ ಮಾಂಸವನ್ನು ಅಲ್ಲದೆ ಬೇರೆ ಯಾವುದೇ ರೀತಿಯ ಆಕ್ರಮಗಳಿಗೆ ಅವಕಾಶ ನೀಡತಕ್ಕದ್ದಲ್ಲ.
12. ಕುಷ್ಠ ರೋಗಿ, ಹುಣ್ಣಿರುವವರು ಸಾಂಕ್ರಾಮಿಕ ರೋಗಗಳಿಂದ ನರಳುವವರು ಮಾಂಸ ಮಾರಾಟಕ್ಕೆ ಅರ್ಹರಲ್ಲ.
13. ಪಂಚಾಯ್ತಿಯಿಂದ ಆಗಿಂದಾಗ್ಗೆ ಸೂಚಿಸಬಹುದಾದ ಸಲಹೆ ಸೂಚನೆಗಳಿಗೆ ಬದ್ಧರಾಗಿರತಕ್ಕದ್ದು.

(ಸಹಿ)
ಪ್ರಧಾನರು,
ಬಿಂತ್ರವಳ್ಳಿ ಮಂಡಲ ಪಂಚಾಯಿತಿ

---

# 'ಸಿ' ಮತ್ತು 'ಡಿ' ಮರು ಸರ್ವೆ

(4ನೇ ಪುಟದಿಂದ)

5. ಪಶ್ಚಿಮ ಘಟ್ಟಗಳಲ್ಲಿ ರೂಪಿಸಿರುವ ಎಲ್ಲ ಬೃಹತ್ ಯೋಜನೆಗಳ ವಾಸ್ತವಿಕ ಲಾಭ-ನಷ್ಟದ ಬಗ್ಗೆ ಮರು ವಿಮರ್ಶೆ, ಮರು ಮೌಲ್ಯಮಾಪನ ನಡೆಯಬೇಕು.

6 ಹೆಬ್ಬೆ ಜಲಪಾತದಂಥ ನಿಸರ್ಗ ಸೌಂದರ್ಯದ ತಾಣಗಳು, ಕೊಪ್ಪದ ಬಳಿಯ ಕೋಟೆಗುಡ್ಡದಂಥ ಐತಿಹಾಸಿಕ ಸ್ಥಳಗಳು ಮುಂತಾದ ಎಲ್ಲ ಪ್ರೇಕ್ಷಣೀಯ ತಾಣಗಳನ್ನು 'ಪ್ರಬಲ' ಖಾಸಗಿ ವ್ಯಕ್ತಿಗಳು ಒತ್ತುವರಿ ಮಾಡಿಕೊಳ್ಳುವುದನ್ನು ತಡೆಯಬೇಕು.

7. ಜಲ ಮಾಲಿನ್ಯ ನಿಯಂತ್ರಣ ಮಂಡಲಿಯನ್ನು ಚುರುಕುಗೊಳಿಸಿ, ಸಮರ್ಪಕವಾಗಿ ಕೆಲಸ ನಿರ್ವಹಿಸುವಂತೆ ಮಾಡಬೇಕು.

8. ಜಿಲ್ಲೆಯಲ್ಲಿ ಪ್ರಾಚ್ಯವಸ್ತು ಇಲಾಖೆ ಮತ್ತು ಜೀವಶಾಸ್ತ್ರ ಇಲಾಖೆಗಳ ಚಟುವಟಿಕೆಗಳನ್ನು ವಿಸ್ತರಿಸಿ. ಐತಿಹಾಸಿಕ ಸ್ಥಳಗಳ ಹಾಗೂ ವಿಶಿಷ್ಟ ಪ್ರಾಣಿ-ಪಕ್ಷಿ-ಕೀಟ-ಸಸ್ಯ ಮುಂತಾದುವುಗಳ ಸಂಶೋಧನೆ, ಸಂರಕ್ಷಣೆಗಳಿಗೆ ಅವಕಾಶ ಕಲ್ಪಿಸಬೇಕು.

## ಎನ್. ಬಸವರಾಜ್‌ಗೆ ಜಿಲ್ಲಾ ಮಟ್ಟದ ಚಿತ್ರಕಲಾ ಪ್ರಶಸ್ತಿ

ಜಯಪುರ : ಸಾರ್ವಜನಿಕ ಶಿಕ್ಷಣ ಇಲಾಖೆ ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ ಫೆ. 17 ರಂದು ನಡೆಸಿದ ಚಿತ್ರಕಲಾ ಸ್ಪರ್ಧೆಯಲ್ಲಿ ಜಯಪುರ ಪ್ರೌಢ ಶಾಲೆಯ 8ನೇ ತರಗತಿ ವಿದ್ಯಾರ್ಥಿ ಎನ್. ಬಸವರಾಜ್ ಮೂರನೇ ಸ್ಥಾನ ಪಡೆದು, ಪ್ರಶಸ್ತಿ ಜೊತೆಗೆ 100 ರೂ. ಬಹುಮಾನ ಪಡೆದಿದ್ದಾನೆ.

(ವರದಿ : ಶಂ. ನ. ಶೇಷಗಿರಿ)

## ಸಹ|| ಸಂಘಗಳ ನೌಕರರ ಮುಷ್ಕರ ಮುಂದೂಡಿಕೆ

ಕೊಪ್ಪ : ರಾಜ್ಯದ ಕೃಷಿ ಸಹಕಾರ ಸಂಘಗಳ ನೌಕರರ ಬೇಡಿಕೆ ಬಗ್ಗೆ ಮಾರ್ಚ್ ಮೊದಲ ವಾರದಲ್ಲಿ ಜಂಟಿ ಮಾತುಕತೆಗೆ ಏರ್ಪಾಡು ಮಾಡುವುದಾಗಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲ್ ನೀಡಿದ ಭರವಸೆಯ ಮೇರೆಗೆ, ಫೆ. 11 ರಿಂದ ಪುನರಾರಂಭಿಸಬೇಕಿದ್ದ ಮುಷ್ಕರವನ್ನು ಮುಂದೂಡಿರುವುದಾಗಿ ನೌಕರರ ಶೃಂಗೇರಿ, ಕೊಪ್ಪ, ನ. ರಾ. ಪುರ ತಾ|| ಗಳ ಸಂಘದ ಪ್ರ| ಕಾರ್ಯದರ್ಶಿ ತಿಳಿಸಿದ್ದಾರೆ.

---

## ವರದಿಯಲ್ಲಿ ಲೋಪ

ಪ್ರಿಯರೆ,

ದಿನಾಂಕ : 11-2-90ರ 'ಮುಂಜಾವು', ನಲ್ಲಿ ಹರಿಹರಪುರ ಯಕ್ಷಗಾನ ಕೇಂದ್ರದ ವಾರ್ಷಿಕೋತ್ಸವ ಕಾರ್ಯಕ್ರಮದಲ್ಲಿ ಲಕ್ಷ್ಮಿನಾರಾಯಣ ಭಟ್ಟರು ಭಾಗವಹಿಸಲಾಗದಿದ್ದುದರಿಂದ, ಹರಿಹರಪುರದ ಅಧ್ಯಾಪಕ ನಂಜುಂಡ ಶಾಸ್ತ್ರಿಗಳು ಆಗಮಿಸಿ "ಯಕ್ಷಗಾನ ಪರಂಪರೆ" ಎಂಬ ವಿಚಾರದ ಬಗ್ಗೆ ತುಂಬಾ ಚೆನ್ನಾಗಿ ಮಾತನಾಡಿದ್ದರು. 'ಮುಂಜಾವು' ವರದಿಯಲ್ಲಿ ಅವರ ಹೆಸರೇ ಇಲ್ಲ. ಬದಲು ಲಕ್ಷ್ಮಿನಾರಾಯಣ ಭಟ್ಟರ ಹೆಸರಿದೆ ಇದು ವರದಿ ಕಳಿಸಿದ ಕಾರ್ಯದರ್ಶಿಗಳ ತಪ್ಪೋ, ಅಥವಾ ಶಾಸ್ತ್ರಿಗಳು ಬಂದಿದ್ದೇ ತಪ್ಪೋ? ತಿಳಿಯಲಿಲ್ಲ.

ಎಚ್. ಎಸ್. ಗಣೇಶಮೂರ್ತಿ,
ಹುಲಿಗಾರು.

(ವರದಿ ಕಳಿಸಿದ ಕಾರ್ಯದರ್ಶಿಗಳ ತಪ್ಪಿ[illegible] ರಬೇಕು. -ಸಂ.)

# ಶೃಂಗೇರಿ ಕಾಲೇಜಿನ ಬೆಳ್ಳಿ ಹಬ್ಬದ ಸಮಾರಂಭಗಳು

(2ನೇ ಪುಟದಿಂದ)

"ಹಣವಿದ್ದವರು ಮಾಡಿಕೊಳ್ಳಲಿ, ನಿನಗಾದರೂ ಯೋಗ್ಯತೆಯಿಲ್ಲ" ಎಂದು ಸರ್ಕಾರವನ್ನು ಹಂಗಿಸಿ ಮಾತನಾಡಿದ ಅವರು, ಇನ್ನೊಂದು ಕಡೆ ಸಮಾನತೆಯ ಸೂತ್ರದ ಬಗೆಗೂ, ಕೊಳಚೆಯಲ್ಲಿರುವವರ ನೋವಿನ ಬಗೆಗೂ ಮಾತನಾಡಿದರು. ಆರ್ಥಿಕವಾಗಿ ದುರ್ಬಲರಿಗೆ ತಮ್ಮ ಶಕ್ತಿ ಎಷ್ಟೆಂಬುದರ ಅರಿವಿಲ್ಲ. ಅವರೆಲ್ಲ ಮನಸ್ಸು ಮಾಡಿದರೆ ನಮ್ಮ ಮಜಕ್ಕೆಲ್ಲ ಕೊನೆ ಎನ್ನುತ್ತ, ಇಲ್ಲಿನ ವ್ಯವಸ್ಥೆ, ಕಾರ್ಯಾಂಗ, ನ್ಯಾಯಾಂಗ ಇವೆಲ್ಲ ರಾಜಕಾರಣಿಗಳಿಂದ ಕಲುಷಿತಗೊಂಡಿದೆ. ಆದ್ದರಿಂದ ವಿದ್ಯಾವಂತರಾದ ಎಲ್ಲರೂ ಸ್ವಾರ್ಥ ಬಿಟ್ಟು, ದೇಶಕ್ಕಾಗಿ ಸ್ವಲ್ಪವಾದರೂ ಶ್ರಮ ವಹಿಸಬೇಕು ಎಂದು ಕರೆಕೊಟ್ಟರು.

ಮುಖ್ಯ ಅತಿಥಿಗಳಾಗಿದ್ದ ಶಾಸಕ ಯು. ಕೆ. ಶಾಮಣ್ಣ ಇಂಗ್ಲಿಷ್ ಮಾಧ್ಯಮ, ಕ್ಯಾಪಿಟೇಶನ್ ಇವುಗಳನ್ನು ಪ್ರಸ್ತಾಪಿಸುತ್ತ ವಿದ್ಯಾ ಸಂಸ್ಥೆಗಳ ಖಾಸಗೀಕರಣವನ್ನು ಸಮರ್ಥಿಸಿದರು! ಜನಸಾಮಾನ್ಯರ ಕೈಗೆಟುಕದ ರೆಸಿಡೆನ್ಷಿಯಲ್ ಶಾಲೆ, ಅಲ್ಲಿನ ವ್ಯವಸ್ಥೆಗಳನ್ನು ಮೆಚ್ಚಿದ ಜನಪ್ರತಿನಿಧಿಯಾದ ಶಾಮಣ್ಣನವರಿಗೆ, ಅದರಿಂದ ವಂಚಿತರಾದ ಬಹುಸಂಖ್ಯಾತ ಸ್ಥಳೀಯ ವಿದ್ಯಾರ್ಥಿಗಳ ಬಗ್ಗೆ ಏನೂ ಅನಿಸದಿದ್ದದ್ದು ವಿಪರ್ಯಾಸ ಹಾಗೆಯೇ, ಕಾನ್ವೆಂಟ್ ಶಾಲೆಗಳ ಶಿಸ್ತುಬದ್ಧ ಶಿಕ್ಷಣದಿಂದ ತನ್ನ ಮಗ ಒಳ್ಳೆಯ ಉದ್ಯಮಿಯಾದನೆಂಬ ಹೆಗ್ಗಳಿಕೆ ಒಂದು ಕಡೆಯಾದರೆ, ಒಟ್ಟಾರೆ ನಮ್ಮ ದೇಶದ ವ್ಯವಸ್ಥೆಯಲ್ಲಿ ಸಾರ್ವತ್ರೀಕರಣ ಸೋತಿದೆ (ಅಂದರೆ ಖಾಸಗೀಕರಣವೇ ಯೋಗ್ಯ) ಎಂಬ ನಂಬಿಕೆ ಅವರದು. ಇಂಥ ಕಾಲೇಜುಗಳಿಂದ ಹೊರಬಂದ ಸಹಸ್ರಾರು ಯುವ ಜನರು ಭವಿಷ್ಯದ ಬಗ್ಗೆ ಭದ್ರತೆಯಿಲ್ಲದೆ ಕೊರಗುತ್ತ, ಒಂದು ರೋಗಗ್ರಸ್ತ ಸಮಾಜ ನಿರ್ಮಾಣವಾಗಿ, ಮುಂದೊಂದು ದಿನ ಶೃಂಗೇರಿಯಂಥ ಒಂದೊಂದು ಪಟ್ಟಣವೂ ಒಂದೊಂದು ಪಂಜಾಬ್, ಕಾಶ್ಮೀರ ಆಗಬಹುದಾದ ಸ್ಥಿತಿಯ ಬಗ್ಗೆ, ಅಂಥ ವಿದ್ಯಾರ್ಥಿ ಸಮೂಹದ ನೋವಿನ ಬಗ್ಗೆ, ಅವರ ಭವಿಷ್ಯಕ್ಕೆ ಭರವಸೆ ನೀಡಬಲ್ಲ ಯಾವುದೇ ಯೋಜನೆ ಅಥವಾ ಚಿಂತನೆಯ ಬಗ್ಗೆ ಯಾವ ಮಾತನ್ನೂ ಆಡದೆ, ಕೇವಲ ಅವರನ್ನೆಲ್ಲ ಸುಸಂಸ್ಕೃತರೆಂದು ಅಟ್ಟಕ್ಕೆ ಕೂರಿಸುವ ಮಾತನ್ನಾಡಿದರು.

ಸಂಸ್ಥೆಯ ಸಂಸ್ಥಾಪಕ ಸದಸ್ಯರಾದ ದಿ|| ಚಂದ್ರಮೌಳಿರಾವ್ ಮತ್ತು ದಿ|| ವೀರಪ್ಪಗೌಡರ ಹಾಗೂ ಪ್ರಾರಂಭದ ಪ್ರಿನ್ಸಿಪಾಲರಾದ ದಿ|| ಡಾ| ಕೆ. ಬಿ. ರಾಮಕೃಷ್ಣರಾವ್ ಮತ್ತು ದಿ| ಪ್ರೊ|| ಎ. ಬಿ. ಎನ್ ಮೂರ್ತಿ ಇವರುಗಳ ಕುಟುಂಬದ ಸದಸ್ಯರಿಗೂ, ಮಾಜಿ ಪ್ರಿನ್ಸಿಪಾಲ್ ಕೃಷ್ಣರಾವ್ ಅವರಿಗೂ ನೆನಪಿನ ಕಾಣಿಕೆಗಳನ್ನು ನೀಡಿ ಗೌರವಿಸಲಾಯಿತು.

ಅಧ್ಯಕ್ಷತೆ ವಹಿಸಿದ್ದ ಭಾರತೀ ವಿದ್ಯಾ ಸಂಸ್ಥೆಯ ಅಧ್ಯಕ್ಷರಾದ ಹರಿಹರಪುರ ಮಠಾಧೀಶರು ಮಾತನಾಡಿ, ಕಾಲೇಜಿನ ಆರಂಭದ ದಿನಗಳಲ್ಲಿ ತೋರಿಸಿದ ಪ್ರೀತಿಯನ್ನೇ ಸಾರ್ವಜನಿಕರು ತೋರಿಸಿ ಸಹಕರಿಸಿದರೆ, ಕಾಲೇಜು ಇನ್ನೂ ಉತ್ತಮ ಸ್ಥಿತಿಗೆ ತಲುಪುವ ಭರವಸೆ ನೀಡಿದರು.

ಬೆಳ್ಳಿ ಹಬ್ಬದ ಕೊನೆಯ ದಿನ ಹಳೆ ವಿದ್ಯಾರ್ಥಿಗಳ ದಿನಾಚರಣೆಯ ಮುಖ್ಯ ಅತಿಥಿಗಳಲ್ಲೊಬ್ಬರಾದ ಕೆ. ವಿ. ರವೀಂದ್ರನಾಥ ಟಾಗೋರ್, ಈ ಕಾಲೇಜಿನ ಮೊದಲ ಪ್ರಿನ್ಸಿಪಾಲ್ ಆಗಿದ್ದ ಕೆ. ಬಿ. ರಾಮಕೃಷ್ಣರಾಯರ ಕಾರ್ಯದಕ್ಷತೆ, ವಿದ್ಯಾರ್ಥಿಗಳ ಮೇಲಿನ ಅವರ ಪ್ರೀತಿ, ಏನೇ ಆಗಲಿ ಕಾಲೇಜನ್ನು ಉಳಿಸಿ ಬೆಳೆಸಬೇಕೆಂಬ ಹೆಬ್ಬಯಕೆ – ಇವುಗಳನ್ನು ಸ್ಮರಿಸಿಕೊಂಡರು.

ಈಚಿನ ದಿನಗಳಲ್ಲಿ ನಗರದ ಕಾಲೇಜುಗಳು ಸುಧಾರಿಸುತ್ತಿದ್ದು, ಗ್ರಾಮೀಣ ಕಾಲೇಜುಗಳ ಸಂಸ್ಕೃತಿ ಕೆಡುತ್ತಿರುವುದಕ್ಕೆ ವಿಷಾದಿಸಿದ ಅವರು, ನಾವೊಂದು ಉತ್ತಮ ಆಭರಣವಾದರೆ ಸಮಾಜ ಅದನ್ನು ಧರಿಸಿ ಅಲಂಕರಿಸಿಕೊಳ್ಳಲು ಸಿದ್ಧವಿದೆ ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಈ ಕಾಲೇಜಿನೊಂದಿಗೆ ನಿರಂತರ ಸಂಪರ್ಕ, ಸಹಕಾರ, ಮತ್ತು ಕಾಲೇಜಿಗೆ ಒಳ್ಳೆಯದಾಗುವಂಥ ಯೋಜನೆಗಳನ್ನು ಹಮ್ಮಿಕೊಳ್ಳಲು ಆರಂಭಿಸಿರುವ ಹಳೆ ವಿದ್ಯಾರ್ಥಿಗಳ ಸಂಘಕ್ಕೆ ಎಲ್ಲಾ ಹಳೆ ವಿದ್ಯಾರ್ಥಿಗಳೂ ಸದಸ್ಯರಾಗಿ ಸಹಕರಿಸಲು ಕೋರಿದರು.

ಮತ್ತೊಬ್ಬ ಮುಖ್ಯ ಅತಿಥಿಗಳಾಗಿದ್ದ ಹಾಸನ ಸೆಷನ್ ಕೋರ್ಟ್ ನ್ಯಾಯಾಧೀಶ ಎಂ. ಜೆ. ಸುಧೀಂದ್ರ ಅವರು ಈ ಕಾಲೇಜಿನ ತನ್ನ ವ್ಯಾಸಂಗದ ದಿನಗಳನ್ನು ಜ್ಞಾಪಿಸಿಕೊಂಡು ತುಂಬಾ ಭಾವಪೂರ್ಣವಾಗಿ ಮಾತನಾಡಿದರು.

### ಸಂತೃಪ್ತ ದಿನಗಳು

ಅಧ್ಯಕ್ಷತೆ ವಹಿಸಿದ್ದ ಪ್ರಿನ್ಸಿಪಾಲ್ ಕೃಷ್ಣಪ್ಪಯ್ಯನವರು, ಆರಂಭದ ದಿನಗಳಲ್ಲಿ ಕಾಲೇಜು ಎದುರಿಸಿದ ದುರ್ಭರ ಪರಿಸ್ಥಿತಿಯನ್ನೂ ಆಗ ಊರವರು ತೋರಿಸಿದ ಪ್ರೀತಿ ಔದಾರ್ಯಗಳನ್ನೂ ವಿವರಿಸುತ್ತಾ, ದಿ|| ಚಂದ್ರಮೌಳಿರಾಯರು ಹಲವು ಬಾರಿ ಅವರ ಮನೆಯಿಂದ ಅಕ್ಕಿ ಕಳಿಸಿ ಅಧ್ಯಾಪಕರುಗಳಿಗೆ ಊಟದ ವ್ಯವಸ್ಥೆ ಮಾಡುತ್ತಿದ್ದುದನ್ನು ಸ್ಮರಿಸಿದರು. ಆರಂಭದಲ್ಲಿ ಕೇವಲ 80 ಇದ್ದ ವಿದ್ಯಾರ್ಥಿಗಳ ಸಂಖ್ಯೆ ಬೆಳವಣಿಗೆಯು ಎ. ವಿ. ಕೃಷ್ಣಮೂರ್ತಿ ರ್‍ಯಾಂಕ್ ಪಡೆದ ಮರುವರ್ಷ 200ಕ್ಕೆ ಏರಿ ನಮಗೆಲ್ಲ ಸಂಬಳ ಬರುವಂತಾಯಿತು. ಇಂದು 1000 ವಿದ್ಯಾರ್ಥಿಗಳ ಮಹಾ ವಿದ್ಯಾಲಯವಾಗಿದೆ. ನನ್ನ 25 ವರ್ಷಗಳ ಸೇವೆ ಈ ಕಾಲೇಜಿಗೆ ಸಂದಿವೆ. ಇವು ನನ್ನ ಜೀವನದ ಸಂತೃಪ್ತ ದಿನಗಳಾಗಿವೆ ಎಂದರು.

ಎ. ವಿ. ಕೃಷ್ಣಮೂರ್ತಿಯವರನ್ನು ಸನ್ಮಾನಿಸಲಾಯಿತು.

### ವಿಚಾರ ಸಂಕಿರಣ

ಜ್ಞಾನಪೀಠ ಪ್ರಶಸ್ತಿ ವಿಜೇತ ಕುವೆಂಪುರವರ

(4ನೇ ಪುಟಕ್ಕೆ)

# ಆದರ್ಶ ಜೀವಿ ದಿ| ಜನಾರ್ದನ ಹೆಬ್ಬಾರ್

ಸಂಸ್ಕೃತದ ಒಂದು ಉಕ್ತಿ ಹೀಗಿದೆ: "ಸರ್ವ ದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ" ಎಂದು. (ಎಲ್ಲ ದೇವರಿಗೆ ಮಾಡಿದ ನಮಸ್ಕಾರವೂ ಪರಮಾತ್ಮನೊಬ್ಬನಿಗೇ ಸಲ್ಲುತ್ತದೆ ಎಂದು ತಾತ್ಪರ್ಯ). ಅದೇ ಧಾಟಿಯಲ್ಲಿ "ಸರ್ವ ಜೀವ ತಿರಸ್ಕಾರಃ ಕೇಶವಂ ಪ್ರತಿಗಚ್ಛತಿ"–ಅಂದರೆ ಯಾವುದೇ ಒಂದು ಜೀವಿಯ ಬಗ್ಗೆ ನಾವು ತಾಳುವ ತಿರಸ್ಕಾರ ಭಾವನೆಯೂ ಆ ಪರಮಾತ್ಮನಿಗೇ ಸೇರುತ್ತದೆ; ಆದ್ದರಿಂದ ಅದೂ ಕೂಡದು–ಎಂದು ಹೇಳುತ್ತಿದ್ದವರು ದಿ|| ಜನಾರ್ದನ ಹೆಬ್ಬಾರ್.

ಪ್ರಕೃತಿಯ ಸೆರಗಿನ ದುರ್ಗದಬೆಟ್ಟದ ತಪ್ಪಲಿನಲ್ಲಿರುವ ಎಲೆಮಡಲಿನ 'ಜನಾರ್ದನ ನಿಲಯ'ದ ಜನಾರ್ದನ ಹೆಬ್ಬಾರ್ ಅವರು 3-2-90 ರಂದು ನಿಧನಹೊಂದಿದರು.

ಮೇಲೆ ತಿಳಿಸಿದಂಥ ಉದಾತ್ತ ಆಲೋಚನೆಗಳನ್ನಿಟ್ಟುಕೊಂಡಿದ್ದ ದಿವಂಗತರು ಮೃದು ಹೃದಯಿ, ಎಂದೂ ಯಾರನ್ನೂ ನೋಯಿಸಿ ಮಾತನಾಡಿದವರಲ್ಲ. ಸಸ್ಯಪ್ರೇಮಿ, ಪುಷ್ಪ ಪ್ರೇಮಿಯೂ ಆಗಿದ್ದ ಅವರ ಸಾಲು ಬೇಲಿ, ಹೂವಿನ ತೋಟ, ಗಿಡದ ಆರೈಕೆಯ ಕ್ರಮ–ವಿಧಾನಗಳು ಅನುಕರಣೀಯ.

ಅಧ್ಯಾತ್ಮ, ಯೋಗ, ಅನ್ನದಾನ–ಅತಿಥಿ ಸತ್ಕಾರಗಳಲ್ಲಿ ಒಲವಿದ್ದ ಹೆಬ್ಬಾರರು ಇತಿಹಾಸದ ಅಧ್ಯಯನ, ನಾಣ್ಯ ಸಂಗ್ರಹದಂಥ ಹವ್ಯಾಸಗಳನ್ನೂ ಹೊಂದಿದ್ದರು; ಇತ್ತ ಕಲೆ–ಸಾಹಿತ್ಯಗಳ ಉಪಾಸಕರೂ ಆಗಿದ್ದರು

ತಾಳ್ಮೆ, ದೃಢ ಪ್ರಯತ್ನಗಳಿಂದ ಬದುಕನ್ನು ಅರಳಿಸಿಕೊಂಡ ದಿ|| ಹೆಬ್ಬಾರರು, ಸಂಮಿಶ್ರ ಬೆಳೆಯಲ್ಲಿ ಆಸಕ್ತರಾಗಿದ್ದು, ಆ ದಿಕ್ಕಿನಲ್ಲೂ ಅವರ ಸಾಧನೆ ಗಣನೀಯ. ಶಿಸ್ತಿನಿಂದ ಆರೋಗ್ಯವಂತರಾಗಿ ಬದುಕಿದ್ದ ಅವರು, ಕಳೆದ ಒಂದು ವರ್ಷದಿಂದ ಪ್ಲೇಗ್ ಅನಾರೋಗ್ಯಕ್ಕೆ ಚಿಕಿತ್ಸೆ ತೆಗೆದುಕೊಳ್ಳುತ್ತಿದ್ದರು.

ದಿ|| ಹೆಬ್ಬಾರರು ಒಬ್ಬ ಮಗ ಮತ್ತು ಮೂವರು ಹೆಣ್ಣು ಮಕ್ಕಳನ್ನು ಅಗಲಿದ್ದಾರೆ.

● ಹು. ನಾ. ಪೀ.

# ಎಸ್. ಎಸ್. ಎಲ್. ಸಿ. ಪರೀಕ್ಷಾರ್ಥಿಗಳಿಗಾಗಿ ಜೀವ ಶಾಸ್ತ್ರದ ಲಘು ಪ್ರಶ್ನೋತ್ತರಗಳು

● ಕೆ. ಎಸ್. ರಾಮಕೃಷ್ಣ ಉಡುಪ

1 ಪ್ರ : ಅಕ್ರೊಮೆಗಾಲಿ ಎಂದರೇನು? ಅದರ ಪರಿಣಾಮವೇನು? 2

ಉ : ಮನುಷ್ಯನು ಪ್ರೌಢಾವಸ್ಥೆಗೆ ಬಂದ ಮೇಲೆ ಪಿಟ್ಯುಟರಿಯು ಬೆಳವಣಿಗೆಯ ಹಾರ್ಮೋನು ಅತಿಯಾಗಿ ಸ್ರವಿಸುವುದರಿಂದ ಉಂಟಾಗುವ ಖಾಯಿಲೆಯೆ ಅಕ್ರೊಮೆಗಾಲಿ.

ಪರಿಣಾಮ : ದವಡೆ, ಕೈ ಮತ್ತು ಕಾಲು ಬೆರಳುಗಳು ಮೂಳೆಗಳು ಹೆಚ್ಚು ಉದ್ದವಾಗಿ ಬೆಳೆದು ಶರೀರ ಅಸಹ್ಯವಾಗುತ್ತದೆ.

2 ಪ್ರ : ಕರಾವಳಿಯಲ್ಲಿ ವಾಸಿಸುವ ಜನರಿಗೆ ಸರಳ ಗಾಯಿಟರ್ ಉಂಟಾಗದಿರಲು ಕಾರಣವೇನು ? 1

ಉ : ಅವರ ಆಹಾರವು ಸಮುದ್ರೋತ್ಪನ್ನಗಳು ಅಥವಾ ಕರಾವಳಿಯಲ್ಲಿ ಬೆಳೆದ ಆಹಾರ ಪದಾರ್ಥಗಳಾಗಿದ್ದು ಅವುಗಳಲ್ಲಿ ಹೇರಳ ಐಯೊಡಿನ್ ಇರುತ್ತದೆ.

3 ಪ್ರ : ತುರ್ತುಪರಿಸ್ಥಿತಿಯ ಹಾರ್ಮೋನು ಯಾವುದು ? ಅದನ್ನು ಯಾವ ಗ್ರಂಥಿ ಸ್ರವಿಸುತ್ತದೆ? 1

ಉ : ಅಡ್ರಿನ್ಯಾಲಿನ್; ಅಡ್ರಿನಲ್ ಗ್ರಂಥಿ.

4 ಪ್ರ : ಲ್ಯಾಂಗರ್‌ಹಾನ್ಸನ ಕಿರು ದ್ವೀಪಗಳ ಬೀಟಾಕೋಶಗಳು ಉತ್ಪತ್ತಿ ಮಾಡುವ ಹಾರ್ಮೋನನ್ನು ಮತ್ತು ಅದರ ಎರಡು ಕಾರ್ಯಗಳನ್ನು ತಿಳಿಸಿ. 1½

ಉ : ಇನ್ಸುಲಿನ್; ಕಾರ್ಯ : (1) ಗ್ಲೂಕೋಸ್ ಮಾರ್ಪಟ್ಟು ಗ್ಲೈಕೋಜೆನ್ ಆಗಿ ಶರೀರದಲ್ಲಿ ಸಂಗ್ರಹವಾಗುವಂತೆ ಮಾಡುತ್ತದೆ. (2) ರಕ್ತದಲ್ಲಿರುವ ಗ್ಲೂಕೋಸ್ ಜೀವಕೋಶಗಳಿಗೆ ಪೂರೈಕೆಯಾಗುವಂತೆ ಮಾಡುತ್ತದೆ.

5 ಪ್ರ : ಅನುವಂಶೀಯತೆಯ ಮೂರು ನಿಯಮಗಳಾವುವು? 1½

ಉ : ಗುಣಾಣುಗಳ ಪ್ರಾಬಲ್ಯ ನಿಯಮ ; ಗುಣಾಣುಗಳ ಪ್ರತ್ಯೇಕತೆಯ ನಿಯಮ ; ಗುಣಾಣುಗಳ ಸ್ವತಂತ್ರ ವಿನ್ಯಾಸ ನಿಯಮ.

6 ಪ್ರ : ಲಿಂಗ ಸಂಬಂಧ ಅನುವಂಶೀಯತೆ ಎಂದರೇನು? ಎರಡು ಉದಾಹರಣೆ ಕೊಡಿ. 2

ಉ : ಲಿಂಗ ನಿರ್ಧಾರದ X ವರ್ಣ ತಂತುವಿನಲ್ಲಿರುವ ಗುಣಾಣುಗಳ ಮೂಲಕ ತಂದೆ ತಾಯಿಯಿಂದ ಗುಣಗಳು ಪೀಳಿಗೆಗೆ ಮುಂದುವರಿಯುವುದಕ್ಕೆ ಲಿಂಗ ಸಂಬಂಧ ಅನುವಂಶೀಯತೆ ಎಂದು ಹೆಸರು.

ಉದಾ : ವರ್ಣಾಂಧತೆ ; ಹೀಮೊಫಿಲಿಯ.

7 ಪ್ರ : ಮ್ಯುಟೇಶನ್ ಎಂದರೇನು ? ಅದರ ಎರಡು ವಿಧಗಳಾವುವು? 2

ಉ : ಹಠಾತ್ತನೆ ತಳಿ ವಸ್ತುಗಳಲ್ಲಿ ಉಂಟಾಗುವ ಬದಲಾವಣೆಯೆ ಮ್ಯುಟೇಶನ್.

ವಿಧ : ಜೀನ್ ಮ್ಯುಟೇಶನ್ ; ವರ್ಣ ತಂತು ಮ್ಯುಟೇಶನ್

8 ಪ್ರ : ಇವುಗಳನ್ನು ಹೆಸರಿಸಿ : 2

(ಎ) ಕಾರ್ಪಸ್‌ಲ್ಯೂಟಿಯಂ ಸ್ರವಿಸುವ ಹಾರ್ಮೋನು

(ಬಿ) ತಳಿ ಶಾಸ್ತ್ರದ ಜನಕ (ಸಿ) ಒಂದು ಮ್ಯುಟಾಜನ್

(ಡಿ) ಥೈರಾಯಿಡ್‌ನಲ್ಲಿ ಹುದುಗಿರುವ ಗ್ರಂಥಿ.

ಉ : (ಎ) ಪ್ರೊಜೆಸ್ಟಿರಾನ್ (ಬಿ) ಗ್ರೆಗರ್ ಮೆಂಡಲ್

(ಸಿ) ನೈಟ್ರಿಕ್ ಆಮ್ಲ (ಡಿ) ಪ್ಯಾರಾ ಥೈರಾಯಿಡ್.

(ಮುಂದುವರಿಯುವುದು)

# ತುಳಿತಕ್ಕೊಳಗಾದ ಜನಸಮುದಾಯದ ಮಹಾಕಾವ್ಯ - ಮಂಡೇಲಾ

ಮೊನ್ನೆ ಫೆಬ್ರುವರಿ 11 ನೇ ತಾರೀಖಿನಂದು ನೆಲ್ಸನ್ ಮಂಡೇಲ ಬಿಡುಗಡೆಯಾಗಿ ಬಿಟ್ಟ ಜೀವನದ ವಸಂತವನ್ನೆಲ್ಲ ಬಿಳಿಯ ತೊಗಲಿನ ಅಧಿಕಾರಶಾ(ದಾ)ಹಿಗಳ ನಿರ್ಲಜ್ಜ ಕಿರುಕುಳದಲ್ಲಿ, 27 ವರ್ಷಗಳ ಕಾರಾಗೃಹವಾಸದಲ್ಲಿ ಕಳೆದ ಮಂಡೇಲ, ಈಗ ದಕ್ಷಿಣಾಫ್ರಿಕದ ತುಳಿತಕ್ಕೊಳಗಾದ ಅವಕಾಯಕ ಸಮುದಾಯಕ್ಕೆ ಹೊಸ ವಸಂತೋತ್ಸಾಹವನ್ನು ತಂದು ಬಿಟ್ಟಿದ್ದಾನೆ. ಜಗತ್ತಿನ ಮಾನವ ಇತಿಹಾಸಕ್ಕೆ ಹೊಸದೊಂದು ತಿರುವನ್ನು ತಂದಿದ್ದಾನೆ.

ಸ್ವಾತಂತ್ರ್ಯ ಎಂಬುದು ಕನಸಲ್ಲ, ಬೊಗಳೆ ಬಿಡಲು ಇರುವ ಆದರ್ಶ ಮಾತ್ರವಲ್ಲ. ಅದು ಬದುಕಿನುದ್ದಕ್ಕೂ ಹೋರಾಡುತ್ತ, ವ್ಯಕ್ತಿಯ ವೈಯಕ್ತಿಕ ಸುಖ-ದುಃಖಗಳಿಗಿಂತ ಹಿರಿದಾದ, ಸಾಧಿಸಬಹುದಾದ, ವಾಸ್ತವದಲ್ಲಿ ವಾಸ್ತವ ಅದು. ಬದುಕಲು ಅನಿವಾರ್ಯವಾಗಿ ಬೇಕಾದ ಮಾನವೀಯ ಮೌಲ್ಯವೇ ಸ್ವಾತಂತ್ರ್ಯ. ಇಂತಹ ವ್ಯಾಖ್ಯೆಯನ್ನು ಮಂಡೇಲ ನೀಡಿದ್ದಾರೆ, ಹೃದಯ ಇದ್ದವರು ಓದಿಕೊಳ್ಳಲು ಹೇಳಿದ್ದಾರೆ.

ನಮ್ಮ ದೇಶದಲ್ಲಿ ನಾವೆಲ್ಲ ಸ್ವಲ್ಪ ಮರ್ಯಾದೆ ಇದೆಯೆಂದು ತಿಳಿಯುವುದಾದರೆ ಮಂಡೇಲರ ಹೃದಯದ ಆದಮ್ಯ ವಾಂಛೆಯನ್ನು ಅರ್ಥಮಾಡಿಕೊಳ್ಳಬೇಕು. ಬಣ್ಣದಲ್ಲಿ ಕರಿಯರಾಗಿ ಹುಟ್ಟಿದ್ದಕ್ಕೆ ಬಿಳಿಯರ ವರ್ಣಭೇದದ ಸರಕಾರದ ಆಡಳಿತದಲ್ಲಿ 'ದಸ್ಯು'ಗಳಾಗಿ ಬಾಳಬೇಕಾಗಿ ಬಂದ ದಕ್ಷಿಣಾಫ್ರಿಕದ ಬಹುಸಂಖ್ಯಾತರ ಪರವಾಗಿ ಮಂಡೇಲ ಬದುಕಿನುದ್ದಕ್ಕೂ ಹೋರಾಡಿದ್ದಾರೆ.

ಬಹು ಪ್ರಾಚೀನ ಚರಿತ್ರೆ ಇರುವ ನಾವು ನಮ್ಮ ಹಾಗೇ ಮಣ್ಣಿನ ಬಣ್ಣವಿರುವ, ದುಡಿತದ ಹೊರತು ಮತ್ತೇನನ್ನೂ ತಿಳಿಯದ ಬಹು ದೊಡ್ಡ ಜನವರ್ಗವನ್ನು ಅತ್ಯಂತ ಹೀನವಾಗಿ, ಹಲವು ಬಗೆಯ ಅಪಮಾನಗಳಿಗೆ ಅವರನ್ನು ಗುರಿಪಡಿಸಿ ಸಂತೋಷ ಪಡುತ್ತಾ ನಿರ್ಲಜ್ಜೆಯಿಂದ ಇತಿಹಾಸವನ್ನು ನಡೆಸಿಕೊಂಡು ಬಂದಿದ್ದೇವೆ. ನಮ್ಮಂತೇ ಇರುವವರನ್ನು ನಮ್ಮ ಸಮಾನರೆಂದು ಕಾಣುವ ವಿವೇಕ ನಮ್ಮಲ್ಲಿ ಬರಲೇ ಇಲ್ಲ. ಇದರಿಂದ ಪವಿತ್ರ ಭೂಮಿಯ ಜನರೆಂದುಕೊಳ್ಳುವ ನಮಗೆ ಇತರರನ್ನು ಅವಹೇಳನ ಮಾಡುವಾಗ ನಾಚಿಕೆಯಾಗಲಿಲ್ಲ' ನಮ್ಮದು ಸಣ್ಣತನ ಎನಿಸಲಿಲ್ಲ, ಇದು ಆರೋಗ್ಯದ ಮನಸಲ್ಲ ಅನಿಸಲಿಲ್ಲ. ಮೇಲು ವರ್ಣದಲ್ಲಿ ಹುಟ್ಟಿದ್ದೇ ಕೆಳವರ್ಣದವರನ್ನು ಅವಮಾನಗೊಳಿಸಲು ಎಂದು ಅಟ್ಟಹಾಸದಿಂದ ಮೆರೆದ ನಮಗೆ ಎಷ್ಟು ಮರ್ಯಾದೆ ಎಂದು ಮಂಡೇಲರನ್ನೇ ಕೇಳಬೇಕೇನೊ!

ಮಂಡೇಲ ಕೇವಲ ದಕ್ಷಿಣ ಆಫ್ರಿಕದ ಕರಿಯರ ನಾಯಕ ಮಾತ್ರವಲ್ಲ, ವಿಶ್ವದ ಸ್ವಾತಂತ್ರ್ಯವಂಚಿತ ಜನಸಮುದಾಯದ ಸ್ಫೂರ್ತಿಯ ಕೇಂದ್ರ. ಆರ್ಥಿಕ ಅಥವಾ ಸಾಮಾಜಿಕ-ಧಾರ್ಮಿಕ ಕಾರಣಗಳಿಗಾಗಿ ತುಳಿತಕ್ಕೊಳಗಾದ ಜನಸಮುದಾಯಕ್ಕೆಲ್ಲ ನೆಲ್ಸನ್ ಮಂಡೇಲರ ಹೋರಾಟದ ಬದುಕೇ ಒಂದು ಮಹಾ ಕಾವ್ಯ.

—ಕೆ. ಪುಟ್ಟಯ್ಯ, ಶೃಂಗೇರಿ.

## ಶಿಕ್ಷಕರ ಭವನಕ್ಕೆ ದೇಣಿಗೆಗೆ ಮನವಿ

ಕೊಪ್ಪ : ಇಲ್ಲಿನ ಪಟ್ಟಣ ಶಾಲೆ ಮತ್ತು ಇಂಡಿಯನ್ ಬ್ಯಾಂಕ್ ನಡುವಿನ ನಿವೇಶ[ನ]ದಲ್ಲಿ 6 ಲಕ್ಷ ರೂ. ವೆಚ್ಚದಲ್ಲಿ ಶಿಕ್ಷಕ[ರ] ಭವನ ನಿರ್ಮಾಣಕ್ಕೆ ಜಿ.ಪ. ಅನುಮೋದ[ನೆ] ನೀಡಿದೆ. ಜಿ.ಪ. ಅನುದಾನದಿಂದ 1 ಲಕ್ಷ[,] ಶಿಕ್ಷಕರ ಸಂಬಳದಿಂದ ನೀಡುವ ದೇಣಿ[ಗೆ]ಯಿಂದ 1 ಲಕ್ಷ ರೂ. ಸಂಗ್ರಹವಾಗಲಿ[ದೆ].

ಮಿಕ್ಕ 3 ಲಕ್ಷ ರೂ. ಸಂಗ್ರಹಿಸಲು 25, 10 ಮತ್ತು 5 ರೂ.ಗಳ ಕೂಪನ್‌ಗಳನ್ನು ಮುದ್ರಿಸಿ ಶಿಕ್ಷಕರ ವಶ ನೀಡಲಾಗಿದ್ದು, ಆಯಾ ಪ್ರದೇಶದ ಶಿಕ್ಷಕರು ಸಾರ್ವಜನಿಕರನ್ನು ಸಂಪರ್ಕಿಸಿದಾಗ ಉದಾರವಾ[ಗಿ] ಕೂಪನ್ ಕೊಂಡು ಧನ ಸಹಾಯ ನೀ[ಡ]ಬೇಕೆಂದು ಸಹಾಯಕ ಶಿಕ್ಷಣಾಧಿಕಾರಿ ಎ. ಟಿ. ಚಾಮರಾಜ್ ಕೋರಿದ್ದಾರೆ.

# ಅರಳುವ ಪ್ರತಿಭೆ: ಮಾ| ಶಶಿಭೂಷಣ

ನುಗ್ಗಿಮಕ್ಕಿ ಗೋಪಾಲರಾಯರ ಮಗ 10 ವರ್ಷದ ಪುಟಾಣಿ ಶಶಿಭೂಷಣ ತನ್ನ ಪುಟ್ಟ ಕೈ ಬೆರಳುಗಳಿಂದ ದೊಡ್ಡ ಸಂಗೀತ ಕಛೇರಿಯಲ್ಲಿ ಘಟ ನುಡಿಸುವುದನ್ನು ನೋಡಿದಾಗ 'ಬೆಳೆವಸಿರಿ ಮೊಳಕೆಯಲ್ಲಿ' ನಾಣ್ನುಡಿ ನೆನಪಾಗುತ್ತದೆ.

ರಾಜ್ಯ-ಹೊರ ರಾಜ್ಯಗಳಿಂದ ಪ್ರಸಿದ್ಧ ಹಾಗೂ ಉದಯೋನ್ಮುಖ ಕಲಾವಿದರುಗಳ ದಂಡೇ ನೆರೆಯುವ ಸೂರಳಿಯ ಪುರಂದರ-ತ್ಯಾಗರಾಜ ಆರಾಧನೋತ್ಸವದಲ್ಲಿ ಈ ಎಳೆಯ ಹೊರ ರಾಜ್ಯದ ಪ್ರಸಿದ್ಧ ಗಾಯಕರ ಹಾಡುಗಾರಿಕೆ, ಪಿಟೀಲು ಮತ್ತು ಮೃದಂಗ ಕಛೇರಿಯಲ್ಲಿ ಅವರಿಗೆ ಸರಿಸಮನಾಗಿ ತಾಳ ತಪ್ಪದಂತೆ ಘಟ ನುಡಿಸುತ್ತಿದ್ದುದನ್ನು ಕಂಡಾಗ, ಭವಿಷ್ಯದ ಒಬ್ಬ ವಿದ್ವಾಂಸನಾಗುತ್ತಾನೆ ಎನ್ನಿಸಿತು.

ಕಛೇರಿ ಮುಗಿದೊಡನೆ ಇನ್ನೊಬ್ಬರ ಸಂಗೀತ ಅಥವಾ ವಾದ್ಯಗಳನ್ನು ತನ್ಮಯತೆಯಿಂದ ಆಲಿಸುವ, ತುಂಟ ಕಣ್ಣಿನ, ನಗುಮುಖದ ಈ ಬಾಲಕನಲ್ಲಿ ಕಲಾವಿದನಿಗೆ ಇರಬೇಕಾದ ಏಕಾಗ್ರತೆಯೂ ಮನೆ ಮಾಡಿದೆ.

ಕಲಾವಿದರ ವಂಶದ ಹಿನ್ನೆಲೆಯಿರುವ ಶಶಿಭೂಷಣ ಶಾಸ್ತ್ರೀಯವಾಗಿ ಘಟ ಕಲಿತವನಲ್ಲ. ರೇಡಿಯೋ, ಟೇಪ್‌ರೆಕಾರ್ಡರ್‌ಗಳ ಸಂಗೀತ ಕೇಳಿ ತಾಳದ ಪ್ರಜ್ಞೆ ಗಳಿಸಿಕೊಂಡಿದ್ದು, ಮೃದಂಗವನ್ನೂ ನುಡಿಸುತ್ತಾನಂತೆ.

ತಂದೆ - ತಾಯಿಗಳ ಪ್ರೋತ್ಸಾಹ, [ವಿ]ದ್ವಾಂಸರಾದ ರಾಮಚಂದ್ರ, ಗಣೇಶ [...] ಇವರುಗಳ ಮಾರ್ಗದರ್ಶನ, [...] ಶಿಕ್ಷಕಿಯರ ಉತ್ತೇಜನಗಳನ್ನು [...] ಮೆಚ್ಚುಗೆಯಿಂದ ನೆನೆಯುತ್ತಾನೆ. [...]ಪ್ಪ, ನ.ರಾ. ಪುರಗಳಲ್ಲೂ ಸಂಗೀತ ಕಛೇರಿಗಳಲ್ಲಿ ಭಾಗವಹಿಸಿ ಮೆಚ್ಚುಗೆ ಗಳಿಸಿರುವ ಈತ ಚಿತ್ರ ಕಲೆಯಲ್ಲೂ ಬಹುಮಾನಗಳನ್ನು ಗಳಿಸಿದ್ದಾನೆ. ಅಂತೆಯೇ ಶಾಲೆಯಲ್ಲೂ ಒಬ್ಬ ಪ್ರತಿಭಾವಂತ ವಿದ್ಯಾರ್ಥಿಯೆನ್ನಿಸಿಕೊಂಡಿದ್ದಾನೆ. (ಕೊಪ್ಪದ ಕಾನ್ವೆಂಟ್ ಶಾಲೆಯಲ್ಲಿ 5ನೇ ತರಗತಿಯಲ್ಲಿ ಓದುತ್ತಿದ್ದಾನೆ )

ತಂದೆ-ತಾಯಿಗಳ ನಿರಂತರ ಪ್ರೋತ್ಸಾಹದೊಂದಿಗೆ ಸರಿಯಾದ ಗುರುವಿನ ಮಾರ್ಗದರ್ಶನವೂ ದೊರೆತರೆ, ಈತನೊಬ್ಬ ಉತ್ತಮ ಕಲಾವಿದನಾಗುವುದರಲ್ಲಿ ಸಂಶಯವಿಲ್ಲ.

—ಶಂ. ನ. ಶೇಷಗಿರಿ

# ಬೆಳ್ಳಿ ಹಬ್ಬದ ಸಮಾರಂಭಗಳು

(3ನೇ ಪುಟದಿಂದ)

ಸಾಹಿತ್ಯ ವಿಚಾರ ಸಂಕಿರಣ ಕೊನೆಯ ದಿನ ಏರ್ಪಟ್ಟಿತ್ತು. ಅಧ್ಯಕ್ಷತೆ ವಹಿಸಿದ್ದ ಡಾ|| ಪ್ರಧಾನ ಗುರುದತ್ತ ರಾಮಾಯಣ ದರ್ಶನಂ ಮಹಾಕಾವ್ಯದ ಬಗ್ಗೆ ಮಾತನಾಡಿದರು. ಡಾ || ತಾರಾನಾಥ ಅವರು ಕುವೆಂಪು ಕಾವ್ಯದ ವೈವಿಧ್ಯತೆ, ಅವರ 22 ಕವನ ಸಂಕಲನಗಳ ಸಾವಿರಾರು ಕವನಗಳು ಮೂಡಿ ಬಂದ ಬಗ್ಗೆ, ಅವುಗಳ ವಿಚಾರ-ವಿಶೇಷತೆಗಳನ್ನು ಕುರಿತು ಹೇಳಿದರು.

ಡಾ|| ಶ್ರೀಕಂಠ ಕೂಡಿಗೆ ಕುವೆಂಪು ನಾಟಕಗಳ ಬಗ್ಗೆ, ಅಲ್ಲಿನ ಸಾಮಾಜಿಕ ಪ್ರಜ್ಞೆ, ವಸ್ತು, ಭಾಷೆಗಳ ಬಗ್ಗೆ ಮಾತನಾಡಿದರು. ಡಾ|| ಶಂಕರನಾರಾಯಣ ಅವರು ಕುವೆಂಪು ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ವರ್ಗ-ವರ್ಣ ಸಂಘರ್ಷ ಕುರಿತು ಮಾತನಾಡಿದರು.

ಕೂಡಿಗೆ ಮತ್ತು ಶಂಕರನಾರಾಯಣರ ಭಾಷಣಗಳು ವಿಚಾರಾತ್ಮಕವಾಗಿದ್ದರೂ ಶಂಕರ ನಾರಾಯಣರ ಪ್ರಬಂಧ ಏಕ[ದಂ] ತೀರಾ ಸಪ್ಪೆಯಾಗಿತ್ತು. ಎರಡು ತಿಂ[ಗಳ] ಹಿಂದೆ ಸಾಹಿತ್ಯ ಪರಿಷತ್ತು ಏರ್ಪಡಿಸಿ[ದ] ಕುವೆಂಪು ಸಾಹಿತ್ಯ ವಿಚಾರ ಸಂಕಿರಣದ[ಲ್ಲಿ] ಸ್ಥಳೀಯ ಕಾಲೇಜಿನ ಉಪನ್ಯಾಸಕರುಗ[ಳು] ಬಹಳ ಚೆನ್ನಾಗಿ ವಿಚಾರಗಳನ್ನು ಮಂಡಿ[ಸಿ]ದ್ದರೆನ್ನಿಸಿತು. ಒಟ್ಟು ಕಾರ್ಯಕ್ರಮಗಳ[ಲ್ಲಿ] ಇದೊಂದು ಸಪ್ಪೆಯ ಸಭೆಯಾಯಿತು.

### ಹಳೇ ವಿದ್ಯಾರ್ಥಿಗಳ ಸಂಘ

ಈ ಸಂದರ್ಭದಲ್ಲಿ ಆರಂಭಿಸಲಾಗಿ[ರುವ] ಕಾಲೇಜಿನ ಹಳೇ ವಿದ್ಯಾರ್ಥಿಗಳ ಸಂಘ[ಕ್ಕೆ] ಎಲ್ಲಾ ಹಳೆ ವಿದ್ಯಾರ್ಥಿಗಳೂ ವಾರ್ಷಿ[ಕ] ಚಂದಾ 25 ರೂ. ಸಲ್ಲಿಸಿ ಸದಸ್ಯರಾಗ[ಬೇ]ಕೆಂದು ಕೋರಲಾಗಿದೆ. ಆಸಕ್ತರು ಚಂ[ದ್ರ]ಶೇಖರ ಭಟ್, ವಿ. ಡಿ. ತಾರಾ ಅಥ[ವಾ] ವೀರಪ್ಪ ಗೌಡ, ಕೇರಾಫ್ ಜೆ.ಸಿ.ಬಿ.ಎ[ಂ] ಕಾಲೇಜು, ಶೃಂಗೇರಿ-ಇವರನ್ನು ಸಂಪ[ರ್ಕಿ]ಸಲು ಕೋರಲಾಗಿದೆ.

# 'ಸಿ' ಮತ್ತು 'ಡಿ' ಭೂಮಿ ಮರು ಸರ್ವೆಗೆ ಮೊದಲು ಆಸಕ್ತರೊಂದಿಗೆ ಚರ್ಚೆಗೆ ಆಗ್ರಹ

'ಸಿ' ಮತ್ತು 'ಡಿ' ವರ್ಗದ ಭೂಮಿಯೆಂದು ಸರ್ಕಾರ ಕಂದಾಯ ಇಲಾಖೆಯಿಂದ ಅರಣ್ಯ ಇಲಾಖೆಗೆ ಈ ಹಿಂದೆ ವರ್ಗಾಯಿಸಿದ್ದು ಸುಮಾರು 18 ಲಕ್ಷ ಎಕರೆ ಭೂಮಿಯ ಮರು ಸರ್ವೆಗೆ ಸರ್ಕಾರ ಇದೀಗ ಆದೇಶ ಮಾಡಿದ್ದು, ಅಂಥ ಸರ್ವೆ ಕೈಗೆತ್ತಿಕೊಳ್ಳುವ ಮೊದಲು, ಪರಿಸರ ತಜ್ಞರು ಹಾಗೂ ಸಂಘಟನೆಗಳೂ ಸೇರಿದಂತೆ ಎಲ್ಲ ಆಸಕ್ತರ ಸಮಾಲೋಚನಾ ಸಭೆ ನಡೆಸಿ, ಎಲ್ಲರಿಂದ ಸಲಹೆ, ಅಭಿಪ್ರಾಯ ಸಂಗ್ರಹಿಸಿ ಮಾರ್ಗದರ್ಶಕ ಸೂತ್ರಗಳನ್ನು ರೂಪಿಸಬೇಕೆಂದು ಈಚಿಗೆ ಚಿಕ್ಕಮಗಳೂರಿನಲ್ಲಿ ನಡೆದ ಪರಿಸರ ಸಮಾಲೋಚನಾ ಸಭೆ ಸರ್ಕಾರವನ್ನು ಒತ್ತಾಯಿಸಿದೆ.

ಈ ರೀತಿಯ ಕೂಲಂಕಷವಾದ ಮಾರ್ಗದರ್ಶಕ ಸೂತ್ರಗಳನ್ನು ರೂಪಿಸದಿದ್ದರೆ, ಈ ಸರ್ವೆಯನ್ನು ಪಟ್ಟಭದ್ರ ಭೂ ಮಾಲಿಕ ಹಿತಾಸಕ್ತಿಗಳು ಅಕ್ರಮ ಒತ್ತುವರಿಗಳನ್ನು ವಿಸ್ತರಿಸಿಕೊಳ್ಳಲು ದುರುಪಯೋಗಪಡಿಸಿಕೊಳ್ಳುತ್ತವೆ ಹಾಗೂ ವ್ಯಾಪಕ ಅರಣ್ಯ ನಾಶಕ್ಕೆ ಕಾರಣವಾಗಲಿದೆ ಎಂದು ಸಭೆ ಆತಂಕ ವ್ಯಕ್ತಪಡಿಸಿತು.

ಚಿಕ್ಕಮಗಳೂರು ಮತ್ತು ಕೊಪ್ಪದ ಪರಿಸರ ಜಾಗೃತಿ ವೇದಿಕೆಗಳ ಆಶ್ರಯದಲ್ಲಿ ಸಂಸತ್ಸದಸ್ಯ ಹಾಗೂ ಶಾಸಕರನ್ನೊಳಗೊಂಡು ನಡೆದ ಈ ಸಭೆ ಜಿಲ್ಲೆಯ ವಿವಿಧ ಪರಿಸರ ಸಮಸ್ಯೆಗಳ ಬಗ್ಗೆ ಕೂಲಂಕಷವಾಗಿ ಚರ್ಚಿಸಿ, ಹಲವು ಒತ್ತಾಯ ಮತ್ತು ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟಿತು.

1. ಹೊಸದಾಗಿ ಎಲ್ಲೇ ಜಮೀನು ಮಂಜೂರು ಮಾಡಬೇಕಾದರೂ ಆ ಬಗೆಗಿನ ಪೂರ್ಣ ವಿವರಗಳನ್ನು ಮಂಡಲ ಪಂಚಾಯ್ತಿ ಮತ್ತಿತರ ಸಾರ್ವಜನಿಕ ಸ್ಥಳಗಳಲ್ಲಿ ಪ್ರಚುರಪಡಿಸಬೇಕು.

2 ಕಾಫಿ ಬೆಳೆಯುವುದೆಂದರೆ ಕಾ[ಡು] ಕಡಿಯುವುದು ಅನಿವಾರ್ಯವಿರುವುದ[ರಿಂದ] ಹೊಸದಾಗಿ ಕಾಫಿ ಬೆಳೆಯಲು ಭೂ[ಮಿ] ಮಂಜೂರು ಮಾಡಬಾರದು (ಹಿಡು[ವಳಿ]ಯಲ್ಲಿರುವ ಖುಷ್ಕಿ ಅಥವಾ ಇನ್ನಾ[ವುದೇ] ಭೂಮಿಯ ಪರಿವರ್ತನೆಯಿಂದ ಮಾ[ತ್ರ] ಕಾಫಿ ಬೆಳೆಯಬಹುದು.)

3. ಸಾಮೂಹಿಕ ಉಪಯೋ[ಗದ] ಹಳ್ಳ-ತೊರೆಗಳನ್ನು ಖಾಸಗಿಯವರು [ಆಕ್ರ]ಮಿಸಿಕೊಳ್ಳುವುದಕ್ಕೆ ಅವಕಾಶ [ಕೊಡ]ಬಾರದು.

4. ಸಾರ್ವಜನಿಕ ಹಿತಾಸಕ್ತಿ[ಯ] ಮೊಕದ್ದಮೆಗಳಿಗೆ ಕೋರ್ಟ್ ಶುಲ್ಕ [ರಿಯಾ]ಯ್ತಿ ನೀಡಿ, ಈ ಸೌಕರ್ಯ ದು[ರುಪ]ಯೋಗವಾಗದಂತೆ ಸೂಕ್ತ ರಕ್ಷಣೋ[ಪ]ಾಯಗಳನ್ನು (ಸೇಫ್‌ಗಾರ್ಡ್) ಅ[ಳವಡಿ]ಸಬೇಕು.

(5ನೇ ಪುಟ[ಕ್ಕೆ])

ವಿದ್ಯಾ ಪ್ರೇಮಿಗ್ಗಳಿಗೊಂದು ಆಕರ್ಷಣೆಯ ಕೇಂದ್ರವಾಗಿ ಬೆಳೆದಿರುವ

# ಶೃಂಗೇರಿ ಕಾಲೇಜಿನ ಬೆಳ್ಳಿ ಹಬ್ಬದ ಸಮಾರಂಭಗಳು

● : ಕಲ್ಕುಳಿ ವಿಠಲ ಹೆಗ್ಡೆ

ಮಲೆನಾಡಿನ ಮೂಲೆಯ, ವಿರಳ ಜನ ಸಂಖ್ಯೆಯ, ಸಂಕಷ್ಟದ ಆರ್ಥಿಕ ಸ್ಥಿತಿಯ, ಸಂಸದ್ಧರಿತ ಪರಿಸರದ–ಈ ಎಲ್ಲ ವಿಶಿಷ್ಟತೆಗಳ ನಡುವೆ,

ವಿದ್ಯೆಯ ದೇವರೆಂಬ ಶಾರದಾಂಬೆಯ ಊರಾಗಿ, ಪ್ರತಿಷ್ಠಿತ ಜಾತಿಗಳ ಜನರು ಮಾತ್ರ ಪ್ರತಿಷ್ಠಿತ (ಸಂಸ್ಕೃತ) ಭಾಷೆಯಲ್ಲಿ ವಿದ್ಯಾರ್ಜನೆ ಮಾಡಿ ವಿದ್ವಾಂಸರಾಗುವ ಮಿತಿಯಲ್ಲಿದ್ದ ಈ ಶೃಂಗೇರಿಯನ್ನು;

ಇಂದು ಎಲ್ಲೆಲ್ಲೂ ಸುಶಿಕ್ಷಿತ–ಸುಸಂಸ್ಕೃತರಾದ ವಿದ್ಯಾವಂತರನ್ನು ಕಾಣುವ, ಎಷ್ಟೋ ಜನ ಅಂಥ ವಿದ್ಯಾವಂತರು ಸಮಾಜದ ಪ್ರತಿಷ್ಠಿತ ಹುದ್ದೆಗಳಲ್ಲೋ, ದೇಶ–ವಿದೇಶಗಳ ಸಂಶೋಧನಾ ರಂಗದಲ್ಲೋ ಅಥವಾ ಸ್ವಾವಲಂಬನೆಯ ಬದುಕಿನಲ್ಲೋ ಸಮಾಜಕ್ಕೆ ಮಾದರಿಯಾಗಿ ಬದುಕುತ್ತಿರುವ ಇಂದಿನ ಪರಿಸ್ಥಿತಿಗೆ ಮಾರ್ಪಡಿಸಿರುವ ಶೃಂಗೇರಿಯ ಜೆ. ಸಿ. ಬಿ. ಎಂ. ಕಾಲೇಜು, ಧಾರ್ಮಿಕರಿಗೆ ಶೃಂಗೇರಿ ಮಠ ಹೇಗೆ ಆಕರ್ಷಣೆಯ ಬಿಂದುವೋ ಹಾಗೇ ವಿದ್ಯಾಪ್ರೇಮಿಗಳಿಗೆ ಹೆಮ್ಮೆಯ, ಆಕರ್ಷಣೆಯ ಕೇಂದ್ರವಾಗಿ ಬೆಳೆದು ನಿಂತಿದೆ.

ಇಂಥದೊಂದು ಹೆಮ್ಮರವನ್ನು ಹುಟ್ಟುಹಾಕಿ, ಅದರ ಪಾಲನೆ–ಪೋಷಣೆಗೆ ತಳಹದಿ ಹಾಕಿದ ದಿ॥ ಕೆ. ಸಿ. ಚಂದ್ರಮೌಳಿ ರಾವ್ ಮತ್ತು ದಿ॥ ಕೆ. ಎಸ್. ವೀರಪ್ಪ ಗೌಡ ಹಾಗೂ ಇವರುಗಳಿಗೆ ಸಕಲ ಸಹಾಯ–ಪ್ರೋತ್ಸಾಹಗಳನ್ನು ನೀಡಿದ ದಿ॥ ಡಾ॥ ಟಿ. ಎಂ. ಎ. ಪೈ ಇವರುಗಳ ಚಿರಸ್ಮರಣೀಯ ಕಾರ್ಯವನ್ನು ಯೋಗ್ಯ ರೀತಿಯಲ್ಲಿ ನೆನೆಯುವ ಸಂದರ್ಭ ಮೊನ್ನೆ 16, 17 ಮತ್ತು 18 ರಂದು ನಡೆದ ಕಾಲೇಜಿನ ಬೆಳ್ಳಿ ಹಬ್ಬದ ಸಮಾರಂಭ

**ವಿರೋಧಾಭಾಸಗಳ ಸಮರ್ಥನೆ ?**

ಬೆಳ್ಳಿ ಹಬ್ಬದ ಸಮಾರಂಭಗಳನ್ನು ಉದ್ಘಾಟಿಸಿದ ಮಣಿಪಾಲ ಅಕಾಡೆಮಿ ಆಫ್ ಎಜುಕೇಶನ್ನಿನ ರಿಜಿಸ್ಟ್ರಾರ್ ರಮೇಶ್ ಪೈ ವ್ಯವಸ್ಥೆಯ ಎರಡು ವಿರೋಧಾಭಾಸದ ವಿಚಾರಗಳನ್ನು ಕುರಿತು ರುಚಿಕಟ್ಟಾಗಿ ಮಾತನಾಡಿದರು. ಅತ್ತ ಕ್ಯಾಪಿಟೇಶನ್, ಇಂಗ್ಲಿಷ್ ಮಾಧ್ಯಮಗಳನ್ನು ಸಮರ್ಥಿಸಿ,

(3ನೇ ಪುಟಕ್ಕೆ)

# ಶೃಂಗೇರಿ ಎಸ್. ವಿ. ಕೃಷ್ಣಮೂರ್ತಿಗೆ 2 ಸ್ವರ್ಣ ಪದಕದೊಂದಿಗೆ ಎಂ. ಎಸ್ಸಿ. ಪ್ರಥಮ ರ್‍ಯಾಂಕ್

● ಶಂ. ನ. ಶೇಷಗಿರಿ.

ಈ ಬಾರಿಯ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಣಿ ಶಾಸ್ತ್ರ ಎಂ.ಎಸ್ಸಿ. ಪರೀಕ್ಷೆಯಲ್ಲಿ ಮೊದಲ ರ್‍ಯಾಂಕ್ ಪಡೆದವರು ಶೃಂಗೇರಿಯ ಎಸ್. ವಿ. ಕೃಷ್ಣಮೂರ್ತಿ ಅದರ ಜೊತೆಗೆ ಎರಡು ಸ್ವರ್ಣ ಪದಕಗಳನ್ನೂ ಅವರು ಗಳಿಸಿದ್ದಾರೆ.

ಶೃಂಗೇರಿಗೆ ಸಮೀಪದ ಸಣ್ಣನೆಗುಂದ ವೆಂಕಟರಾಮ ಭಟ್ಟರ ಮಗನಾದ ಈತ ಶೃಂಗೇರಿಯ ಸರ್ಕಾರಿ ಪ್ರೌಢಶಾಲೆ ಮತ್ತು ಜೆ. ಸಿ. ಬಿ. ಎಂ. ಕಾಲೇಜಿನ ಹಳೆಯ ವಿದ್ಯಾರ್ಥಿ. ಸದ್ಯ ಕುದುರೆಮುಖ ಕೇಂದ್ರೀಯ ಶಾಲೆಯಲ್ಲಿ ಉಪನ್ಯಾಸಕರಾಗಿರುವ ಇವರು ಪ್ರಾಣಿ ಶಾಸ್ತ್ರದಲ್ಲಿ ಹೆಚ್ಚಿನ ಸಂಶೋಧನೆ ಮಾಡುವ ಆಕಾಂಕ್ಷೆ ಹೊಂದಿದ್ದಾರೆ.

ಜೆ ಸಿ.ಬಿ ಎಂ. ಕಾಲೇಜಿನಲ್ಲಿ ತಮ್ಮ ನೆಚ್ಚಿನ ಪ್ರಾಧ್ಯಾಪಕ ಡಾ॥ ಗುಂಡಪ್ಪನವರ ಉತ್ತಮ ಮಾರ್ಗದರ್ಶನ ಹಾಗೂ ಪ್ರಿನ್ಸಿಪಾಲ್ ಕೃಷ್ಣಪ್ಪಯ್ಯನವರ ಪ್ರೋತ್ಸಾಹ ತನ್ನ ಈ ಸಾಧನೆಗೆ ನೆರವಾದುವೆಂದು ಕೃಷ್ಣಮೂರ್ತಿ ನಮ್ರತೆಯಿಂದ ಸ್ಮರಿಸುತ್ತಾರೆ.

# ಹಾಸ್ಯ ಧಡಾಕಿಗಳು

—ಎಚ್. ವಿ. ನರಸಿಂಹಮೂರ್ತಿ

ಒಂದು ಸ್ಕೂಲಿಗೆ ಬೆಂಕಿ ಹತ್ತಿ ಉರಿಯುತ್ತಾ ಇತ್ತು. ಹುಡುಗರೆಲ್ಲ ಹೊರಗೆ ಹೋ ಹೋ ಎಂದು ಕುಣಿದಾಡುತ್ತಿದ್ದರು. ಒಂದು ಮೂಲೆಯಲ್ಲಿ ಸುಮ್ಮನೆ ಕುಳಿತ ತಿಮ್ಮನ ಹತ್ತಿರ ಮಾಸ್ತರು ಬಂದು, "ಏನು ಮರಿ, ಸ್ಕೂಲು ಸುಟ್ಟು ಹೋಯಿತು ಅಂತ ಬೇಜಾರ ?" ಅಂದರು.

ಅದಕ್ಕೆ ತಿಮ್ಮ, "ಸ್ಕೂಲು ಸುಟ್ಟು ಹೋದರೆ ಏನು ಪ್ರಯೋಜನ ಸಾರ್ ? ಮಾಸ್ತರೆಲ್ಲ ಹೊರಗಡೆಯೇ ಇದ್ದಾರಲ್ಲ—".

ಇಟ್ಟರೆ ಸಗಣಿ ತಟ್ಟಿದರೆ–ಗೋವಿನ ಗೀತೆಯ ಪದ್ಯವನ್ನು ಮಾಡಿ ಮಾಸ್ತರು "ಏನಾದರೂ ಅನುಮಾನ ಇದ್ದರೆ ಕೇಳಿ" ಎಂದು ವಿದ್ಯಾರ್ಥಿಗಳನ್ನು ಹುರಿದುಂಬಿಸಿದರು.

ವಿದ್ಯಾರ್ಥಿ :— "ಇಟ್ಟರೆ ಸಗಣಿಯಾದೆ—ಇಡದಿದ್ದರೆ?" ಎಂದು ತನ್ನ ಸಂಶಯ ವ್ಯಕ್ತಪಡಿಸಿದ.

# ಕನ್ನಡದಲ್ಲೊಂದು ಅದ್ವಿತೀಯ ಕೃಷಿ ಮಾಧ್ಯಮ — 'ಅಡಿಕೆ ಪತ್ರಿಕೆ'

ಕೃಷಿ ಕ್ಷೇತ್ರದ ಬಹುಮುಖ ಸಮಸ್ಯೆ, ಸುಧಾರಣೆ, ಸಂಶೋಧನೆ, ಅನುಭವ, ಮಾಹಿತಿ ಮುಂತಾದುವನ್ನೊಳಗೊಂಡು ಪುತ್ತೂರಿನಿಂದ ಪ್ರಕಟವಾಗುತ್ತಿರುವ 'ಅಡಿಕೆ ಪತ್ರಿಕೆ' ಮಾಸಿಕ, ಕನ್ನಡದಲ್ಲಿ ನಿಸ್ಸಂಶಯವಾಗಿಯೂ ಅದ್ವಿತೀಯ. ಇದೀಗ ಯಶಸ್ವಿಯಾಗಿ 2ನೇ ವರ್ಷದಲ್ಲಿ ಮುನ್ನಡೆಯುತ್ತಿದೆ (ವಿಳಾಸ : ಅಡಿಕೆ ಪತ್ರಿಕೆ, ಏಳ್ಮುಡಿ, ಪುತ್ತೂರು, ದ.ಕ)

ಈ ಪತ್ರಿಕೆಯ ಬಿಡಿ ಪ್ರತಿಗೆ 3 ರೂ. ಮತ್ತು ವಾರ್ಷಿಕ ಚಂದಾ 30 ರೂ. ಕೊಪ್ಪದಲ್ಲಿ ಈ ಕೆಳಕಂಡ ಸ್ಥಳಗಳಲ್ಲಿ ದೊರೆಯುತ್ತದೆ : 1) ಮಂಜುನಾಥ ಭಟ್, 2) ಕೃಷ್ಣ ಸ್ಟೋರ್ಸ್, 3) ಶ್ರೀಕಾಂತ್, ಸುನಂದಾ ರೇಡಿಯೋ–ಪತ್ರಿಕಾ ಏಜೆಂಟರುಗಳು, ಬಸ್ ಸ್ಟ್ಯಾಂಡ್; 4) ಪ್ರಕಾಶ್, ಉದಯವಾಣಿ ಏಜೆಂಟ್, 5) ಶಿವಾನಂದ ರಾವ್, ನ್ಯಾಷನಲ್ ಸ್ಟೋರ್ಸ್.

ಪತ್ರಿಕೆಯ ಪ್ರತಿಯೊಂದು ಸಂಚಿಕೆಯೂ ಎಷ್ಟೊಂದು ಅಮೂಲ್ಯವಾದ, ರೈತರಿಗೆ ಅತ್ಯಂತ ಉಪಯುಕ್ತವಾದ ವಿಚಾರಗಳನ್ನೊಳಗೊಂಡು ಬರುತ್ತಿದೆಯೆಂದರೆ, ಒಂದೊಂದೂ ಸಂಗ್ರಹ ಯೋಗ್ಯ ಸಂಚಿಕೆಯಾಗಿದೆ. ಆದ್ದರಿಂದ ಎಲ್ಲಾ ಬೆಳೆಗಾರರು ಈ ಪತ್ರಿಕೆ ಕೊಂಡು, ನೆರೆಹೊರೆಯವರಿಗೂ ಪರಿಚಯಿಸಿ, ಇದರಿಂದ ಪ್ರಯೋಜನ ಪಡೆಯುವುದು ಯೋಗ್ಯ. ಈಗ ಬೆಳೆಗಾರರು ತಮ್ಮ ವಿಳಾಸ ತಿಳಿಸಿದರೆ ಅವರಿಗೆ ಒಂದೊಂದು ಸಂಚಿಕೆ ಉಚಿತವಾಗಿ ಕಳಿಸಿ, ಪತ್ರಿಕೆಯ ಪ್ರಸಾರಕ್ಕೆ ಸಹಕರಿಸಲು ಅವರನ್ನು ಕೋರುವ ವ್ಯವಸ್ಥೆ ಮಾಡಲಾಗಿದೆ. ಇತರ ಬೆಳೆಗಾರರ ಹಾಗೂ ಪತ್ರಿಕಾ ಏಜೆಂಟರ ವಿಳಾಸಗಳನ್ನೂ ಕಳಿಸಿದರೆ ಒಳ್ಳೆಯದು.

ಅಷ್ಟೇ ಅಲ್ಲದೆ, ನಮ್ಮ ಬೆಳೆಗಾರರು ತಮ್ಮ ಸಮಸ್ಯೆಗಳನ್ನೂ, ಅನುಭವಗಳನ್ನೂ ಬರೆದರೆ ಅವು ಪ್ರಕಟವಾಗುತ್ತವಲ್ಲದೆ, ಸಮಸ್ಯೆಗಳಿಗೆ ಅನುಭವಿಗಳಿಂದ ಪರಿಹಾರ ಮಾರ್ಗವೂ ಸೂಚಿತವಾಗಬಹುದು.

ಆಸಕ್ತರು ಎಚ್. ಎ. ವಸಂತ ಕುಮಾರ್ ಹರ್ಡೀಕರ್, ಹರಂದೂರು, ಬಾಳಗಡಿ ಅಂಚೆ, ಕೊಪ್ಪ ಇವರನ್ನು ಸಂಪರ್ಕಿಸುವಂತೆ ಕೋರಲಾಗಿದೆ. ಹಿಂದಿನ ಕೆಲವು ಸಂಚಿಕೆಗಳನ್ನೂ ಇವರಿಂದ ಕೇಳಿ ಪಡೆಯಬಹುದು.

—ಶಿವಮಾನೆ [illegible]




## ನನ್ನೂರಿನ ಹಕ್ಕಿಗಳು

ನನ್ನೂರಿನ ಹಕ್ಕಿಗಳು !
ಬಗೆ ಬಗೆ ಬಣ್ಣದ
ವಿಧ ವಿಧ ಜಾತಿಯ
ಹೊಸ ಹೊಸ ರೀತಿಯ ಹಕ್ಕಿಗಳು.
ಕೆಂಪನೆ ಕಪ್ಪನೆ
ಬಿಳಿ ಬಿಳಿ ಚುಕ್ಕೆಯ
ಹಸುರಿನ ಪಟ್ಟೆಯ ಹಕ್ಕಿಗಳು
ನನ್ನೂರಿನ ಹಕ್ಕಿಗಳು
ಗುಂಪು ಗುಂಪಾಗಿ ವಾಸಿಸುತಿಹವು
ಗುಂಪನು ಬಿಟ್ಟರೆ ಬೇಸರಿಸುವವು
ದೂರಕ್ಕೊಮ್ಮೆ ವಲಸೆ ಹೋದರೂ
ಮರಳಿ ಬರುವ ಹಕ್ಕಿಗಳು
ಗೂಡಿನಲಿ ಎರಡು ಮಕ್ಕಳ ಸಾಕಲು
ಕಪ್ಪಿನ ಮರದಲಿ ಮನೆಯನು ಮಾಡಿ
ಕ್ಕರೆಯಿಂದ ಮಕ್ಕಳ ಸಾಕುವ
ನನ್ನೂರಿನ ಚಿಲಿಪಿಲಿ ಹಕ್ಕಿಗಳು
ಮರದಿಂದ ಮರಕೆ ಹಾರುತಲಿರುವುವು
ಗಗನ ಸಾಲಲಿ ನಲಿಯುವುವು
ಹಾರುತ ಕೂರುತ ಕೂಗುತ ಕುಣಿಯುತ
ಸುಖದಿ ದಿನವನು ಕಳೆಯುವುವು

—ಬಾಪಂಕಿ ಪ್ರಕಾಶ್, ಕಡಿನಲ್ಲಿ.

## ರೈತ ಮತ್ತು ನಾಯಿ

ಒಂದೂರಿನಲ್ಲಿ ಒಬ್ಬ ರೈತನಿದ್ದ. ಅವನು ಕಷ್ಟಪಟ್ಟು ದುಡಿಯುತ್ತಿದ್ದ. ಒಮ್ಮೆ ಅವನಿಗೆ ನದಿಯ ದಡದಲ್ಲಿ ಒಂದು ನಾಯಿ ಮರಿ ಕಂಡಿತು ಅದು ಕುಂಯಗುಡುತ್ತಾ, ಅಲ್ಲಿ–ಇಲ್ಲಿ ತಡಕಾಡುತ್ತ ಇತ್ತು. ಅವನು ಅದನ್ನು ಮನೆಗೆ ಎತ್ತಿಕೊಂಡು ಬಂದನು. ಅದಕ್ಕೆ ಆಹಾರ ಕೊಟ್ಟನು. ದಿನವೂ ಹೊಲ ಕಾಯಲು ಹೋಗುವಾಗ ಅದನ್ನೂ ಕರೆದುಕೊಂಡು ಹೋಗುತ್ತಿದ್ದನು.

ಒಂದು ರಾತ್ರಿ ಐದಾರು ಜನ ಕಳ್ಳರು ಅವನ ಹೊಲವನ್ನು ಹೊಕ್ಕರು. ಬೆಳೆಯನ್ನು ಕದ್ದು ಕುಯ್ಯತೊಡಗಿದರು. ಆಗ ನಾಯಿ ಬಂದು ರೈತನನ್ನು ಕೂಗಿ ಎಚ್ಚರಿಸಿತು. ರೈತ ಎದ್ದು, ಹೊಲದಲ್ಲಿ ಕಳ್ಳರನ್ನು ಕಂಡವನೇ ಕೂಡಲೇ ಪೋಲೀಸರನ್ನು ಕರೆಸಿದನು. ಪೋಲೀಸರು ಬಂದರು. ಕಳ್ಳರನ್ನು ಹಿಡಿದುಕೊಂಡು ಹೋದರು.

ಕೊನೆಗೆ ನಾಯಿ ಮತ್ತು ರೈತ ಸುಖವಾಗಿ ಇದ್ದರು.

–ಎಸ್. ಬಿ. ಕಿರಣ್, 6ನೇ ತರಗತಿ,
'ಮಕ್ಕಳ ಕೂಟ', ಉತ್ತಮೇಶ್ವರ.

## ಪರೀಕ್ಷೆಯಲ್ಲಿ

ಒಂದು ದಿನ ಪರೀಕ್ಷೆಯು ನಡೆದಿತ್ತು
ಬುದ್ಧಿವಂತ ಮಕ್ಕಳೆಲ್ಲ ಸರ ಸರ
ರಭಸದಿಂದ ಬರೆದರು
ದಡ್ಡ ಮಕ್ಕಳೆಲ್ಲ ಪಿಳಿ ಪಿಳಿ
ಆಚೆ–ಈಚೆ ನೋಡುತ್ತಿದ್ದರು
ವೇಳೆಯು ಮುಗಿಯಲು ಮಾಸ್ತರು
ಪೇಪರ್ ಪೇಪರ್ ಎಂದರು
ಬುದ್ಧಿವಂತ ಮಕ್ಕಳೆಲ್ಲ ಎಸ್ ಸರ್
ಎಸ್ ಸರ್ ಎಂದು ಪೇಪರ್ ಕೊಟ್ಟರು.
ದಡ್ಡ ಮಕ್ಕಳೆಲ್ಲ ನೋ ಸರ್ ನೋ ಸರ್
ಎಂದು ತಲೆಗೆ ಕೈ ಇಟ್ಟರು.

—ವಿ. ವಾಣಿ,
10ನೇ ತರಗತಿ, ಕೊಪ್ಪ.

## ಹಕ್ಕಿ ಹಾಡು

ಹಕ್ಕಿ ಬಾ ಬಾ ಬಾ
ನನ್ನ ಜೊತೆಗೆ ಆಡಲು ಬಾ
ಚಿವ್ ಚಿವ್ ಚಿವ್ ಚಿವ್ ಕೂಗುತ ಬಾ
ಹಣ್ಣನು ಕೊಡುವೆನು ಬಾ
ಹಕ್ಕಿ ಬಾ ಬಾ ಬಾ

ನನಗೂ ಕೂಗಲು ಕಲಿಸು
ನನಗೂ ಹಾರಲು ಕಲಿಸು
ಬಣ್ಣದ ರೆಕ್ಕೆಯ ಬಡಿಯುತ ಬಾ
ಕಾಳು–ಕಡ್ಡಿಯ ಕೊಡುವೆನು ಬಾ
ತಿನ್ನಲು ಬಾ, ನಲಿಯಲು ಬಾ

ನನ್ನೆಡೆ ಬಾ
ಹಕ್ಕಿ ಬಾ ಬಾ ಬಾ

ಎಂ. ಎ. ಅಲಂಪು,
4ನೇ ತರಗತಿ, ಶಿವಮೊಗ್ಗ.

# ಅರಣ್ಯ ನಾಶ: ಶಾಸಕರ ಅಪಾದನೆ ಕುರಿತು ಸಮೀಕ್ಷೆ

(ಒಂದನೇ ಪುಟದಿಂದ)

ಹಾಗೂ ಅನಂತರ ಸರ್ಕಾರಿ ನೌಕರರ ಮುಷ್ಕರದ ಕಾರಣ ಇಬ್ಬರಿಗೂ ಅನುಕೂಲಕರವಾದ ದಿನ ದೊರೆತಿಲ್ಲ.

ಈ ನಡುವೆ ಶಾಮಣ್ಣ ತಮ್ಮ ಕಾರ್ಯಕರ್ತರೊಂದಿಗೆ ಕಾಡಿಗೆ ಹೋಗಿ ಪರಿಶೀಲಿಸಿದಾಗ ಪುನಃ ಅವೇ ಆರೋಪಗಳು ಬಂದಿವೆ. ಆದರೆ ಅನುಮಾನಗಳಿಗೆ ಸಮಜಾಯಿಷಿ ಕೊಡಲು ಅವರು ಯಾವುದೇ ಅರಣ್ಯ ಅಧಿಕಾರಿಯನ್ನು ಕರೆದೊಯ್ದಿರಲಿಲ್ಲ.

ಮಂಡಲ ಪಂಚಾಯ್ತಿಗೆ ಮಾಹಿತಿ ನೀಡದಿರುವುದು, "ಯಾರಿಗೂ ಲೆಕ್ಕ ಕೊಡಲು ಸಾಧ್ಯವಿಲ್ಲ; ಯಾರು ಬೇಕಾದರೂ ಪರಿಶೀಲನೆಗೆ ಬಂದರೆ, ಸ್ಥಳದಲ್ಲೇ ಎಲ್ಲವನ್ನೂ ವಿವರಿಸುತ್ತೇವೆ" ಎಂದು ಡಿಎಫ್‌ಓ ಹೇಳಿದ್ದು— ಇವೆಲ್ಲ ಹಿನ್ನೆಲೆಯಲ್ಲಿ ಶಾಮಣ್ಣ ಪತ್ರಿಕಾ ಹೇಳಿಕೆ ನೀಡಿ, ಆಪಾದನೆ ಮಾಡಿದ್ದಾರೆ.

**ಆದರೆ ಅದೇ (ಉದಯವಾಣಿ) ಪತ್ರಿಕೆಗೆ ಶೃಂಗೇರಿ, ಕೊಪ್ಪಗಳಲ್ಲಿ ಪ್ರತಿನಿಧಿಗಳಿದ್ದೂ ಅವರಿಗಾಗಲಿ, ಜಿಲ್ಲೆಯ ಪತ್ರಿಕೆಗಳಿಗಾಗಲಿ (ಸ್ಥಳೀಯ ಪತ್ರಿಕೆಗಳ ಮಾತಿರಲಿ !) ಯಾವುದೇ ವಿಚಾರ ತಿಳಿಸದೆ, ಶಿವಮೊಗ್ಗದ ಪತ್ರಕರ್ತನಿಗೆ, ಅದರಲ್ಲೂ ಶಂಕಾಸ್ಪದ ಸನ್ನಿವೇಶದಲ್ಲಿ, ಹೇಳಿಕೆ ನೀಡಿದ್ದೇಕೋ ತಿಳಿಯುವುದಿಲ್ಲ !**

### ಅರಣ್ಯ ಇಲಾಖೆ ಸ್ಪಷ್ಟನೆ

1. ಮೊದಲನೆಯದಾಗಿ, ಮಂಡಲಪ್ರಧಾನರಿಗೆ "1 ವಾರದಲ್ಲಿ ಲೆಕ್ಕ ಕೊಡುವುದಾಗಿ" ತಾನು ಹೇಳಿಲ್ಲ; "ಏನೇ ಅನುಮಾನವಿದ್ದರೂ ಬನ್ನಿ: ಬೇಕಾದರೆ 1 ವಾರ ನಿಂತುಕೊಂಡಾದರೂ ಸರಿ, ಎಲ್ಲವನ್ನೂ ನಿಮಗೆ ತಾಳೆ ಮಾಡಿ ತೋರಿಸುತ್ತೇನೆ" ಎಂದು ಹೇಳಿದ್ದು ಎಂದು ವಲಯ ಅರಣ್ಯಾಧಿಕಾರಿ ಮುನಿಸ್ವಾಮಿ ಹೇಳುತ್ತಾರೆ.

ದಯಂಬಳ್ಳಿಯಿಂದ ಸಾಗಿಸಲಾದ ಮರ (ಮಂಗರ್‌ನ ದರ್ಖಾಸ್ತು) ಕಳೆದ ವರ್ಷ ಮಳೆಗಾಲಕ್ಕೆ ಮೊದಲು ಇನ್ನಿತರ 30–40 ಮರಗಳೊಡನೆ ಕಡಿಸಿದಂಥದು. ಯಾವುದೋ ಹಸಿ ಮರ ಎಂದಾಗ ಅಂಥ ಯಾವುದನ್ನೂ ಕಡಿದಿಲ್ಲವೆಂದು ಫಾರೆಸ್ಟರ್ ಹೇಳಿದ್ದು ನಿಜವಾದರೂ, ಅನಂತರ ಆ ಎಲ್ಲ ನಾಟವನ್ನೂ ಒಟ್ಟಿಗೇ ಸಾಗಿಸಿದ್ದು ಹೌದು. ಆದರೆ ಪ್ರಧಾನರು ಸಂಶಯ ವ್ಯಕ್ತಪಡಿಸಿದ್ದ ಕಾರಣ ಅವರಿಗೆ ಅದರ ವಿವರಣೆ ನೀಡದೆ ಸಾಗಿಸಿದ್ದು ತಪ್ಪಾಗಿದೆ ಎನ್ನುತ್ತಾರೆ.

2 ಯಡಗುಂದದಲ್ಲಿ ಎಲ್ಲಾ ಮರವನ್ನು ನಿಯಮಾನುಸಾರವೇ ಕಡಿದಿದೆ ಗಟ್ಟಿಮುಟ್ಟಾದ ಮರಗಳನ್ನು ಕಡಿದಿಲ್ಲ. ಕಡಿದ ಪ್ರತಿ ಮರದ ಪ್ರತಿಯೊಂದು ದಿಮ್ಮಿಯನ್ನೂ ಲೆಕ್ಕಕ್ಕೆ ತರಲಾಗಿದೆ. ಗಾಳಿಗೆ ಬಿದ್ದ ಹಸಿ ಮರಗಳು, ಅರ್ಧ ಒಣಗಿ ಉಳಿದಿದ್ದ ಹಸಿ ಮರಗಳು, ದೊಡ್ಡ ಮರದಡಿಗೆ ಸಿಕ್ಕಿ ಬಿದ್ದ ಕೆಲವು ಹಸಿ ಮರಗಳು–ಇವುಗಳಿಂದಾಗಿ ಹಸಿ ಮರಗಳನ್ನು ಕಡಿದ ಅನುಮಾನ ಸಾರ್ವಜನಿಕರಿಗೆ ಬಂದಿರಲು ಸಾಧ್ಯ. ಶಾಕಿನಿಂದ ಶೃಂಗೇರಿ ಡಿಪೋಗೆ ಹೊರತು ಒಂದೇ ಒಂದು ದಿಮ್ಮಿಯನ್ನೂ ಬೇರೆಡೆಗೆ ಸಾಗಿಸಿಲ್ಲ. ಅನುಮಾನವಿದ್ದಲ್ಲಿ, ಕಡಿದ ಮರದ ಬೊಡ್ಡೆಗಳ ಲೆಕ್ಕದಲ್ಲಿ ಬಹು ಮಟ್ಟಿಗೆ ಇರಾರು ವಾಕ್ಯಾಗಿ ಇಂತಿಷ್ಟೇ ದಿಮ್ಮಿ ದೊರೆತಿದೆಯೆಂದು ಲೆಕ್ಕ ಹಿಡಿಯಬಹುದಾದ್ದರಿಂದ ಯಾರೂ ಪರಿಶೀಲಿಸಬಹುದು.

3. ರಾತ್ರಿ ಶಾಕಿಗೆ ವಾಪಸು ಹೋಗುವ ಲಾರಿಗಳು ಅರ್ಧ ರಾತ್ರಿಯ ಹೊತ್ತಿಗೆ ಸಂಚರಿಸಿರಬಹುದು ಹೊರತು, ನಾಟ ಎಂಟು–ಒಂಬತ್ತು ಗಂಟೆಯ ನಂತರ ಹೊರಗೆ ಸಾಗಣೆಯಾಗಿಲ್ಲ.

4. ಮರ ಕಡಿಯುವಾಗ ಬೇರೆ ಮರಗಳಿಗೆ ಹಾನಿ ಮಾಡಬಾರದೆಂದು ಕರಾರಿನಲ್ಲಿರುತ್ತದಾದರೂ ವ್ಯಾವಹಾರಿಕವಾಗಿ ಇದನ್ನು ನೂರಕ್ಕೆ ನೂರು ಅನುಸರಿಸುವುದು ಅಸಾಧ್ಯ. ಆದರೂ ಈ ವಿವಾದದ ನಂತರ, 28 ಮರಗಳಿಗೆ ಹಾನಿ ಮಾಡಿದ್ದಕ್ಕಾಗಿ ಕಂಟ್ರಾಕ್ಟರ್ ಮೇಲೆ ಕೇಸು ದಾಖಲಿಸಲಾಗಿದೆ.

ಅಲ್ಲದೆ, ಒಂದೊಂದು ದೊಡ್ಡ ಮರ ಹೋದಾಗ 5-10 ಗುಂಟೆ ಜಾಗ ಪೂರ್ತಿ ಬಯಲಾಗುವುದನ್ನು ಸರಿ ತೂಗಿಸಲು, ಕಳೆದ ವರ್ಷದಿಂದ ಜಾರಿಗೆ ತಂದಿರುವ ನಿಯಮದಂತೆ, ಆ ಜಾಗಗಳಲ್ಲಿ ಸಸಿಗಳನ್ನು ನೆಡಲು ಮರ ಕಂಟ್ರಾಕ್ಟರೇ ಗುಂಡಿಗಳನ್ನು ತೋಡಬೇಕಾಗಿದ್ದು, ಅದರಲ್ಲಿ ಇಲಾಖೆ ಗಿಡಗಳನ್ನು ನೆಡಿಸುತ್ತದೆ. ಈ ಟೆಂಡರಿನಲ್ಲಿ 5000 ಗುಂಡಿಗಳನ್ನು ತೋಡಲಿಕ್ಕಿದೆ. ಈ ಕೆಲಸಗಳನ್ನು ಕಂಟ್ರಾಕ್ಟರು ಕೆಲಸದ ಮುಕ್ತಾಯ ವರದಿಗೆ ಮೊದಲೇ ಮುಗಿಸಬೇಕು.

5. ನಾಟ ಸಂಗ್ರಹಣೆಯ ಈ ಕೆಲಸ ಕೇಂದ್ರ ಸರ್ಕಾರದ ಯೋಜನಾ ವ್ಯಾಪ್ತಿಗೆ ಬರದೆ ಇರುವುದರಿಂದ ಅದು ಮಂಡಲ ಪಂಚಾಯ್ತಿ ಮೂಲಕ ನಡೆಯುವುದಿಲ್ಲ. ಆದಾಗ್ಯೂ, ಯಾರೇ ಆದರೂ ವಿವರ ಕೇಳಿ ಪಡೆಯಬಹುದು. **ಇನ್ನು ಮುಂದೆ ಮರಗಳನ್ನು ಕಡಿಯುವಾಗ (ನಾಟ ಸಂಗ್ರಹಣೆ ಇರಲಿ, ಖಾಸಗಿಯವರ ಮಾಫಿ ಪಾಸ್ ಇರಲಿ) ಸಾರ್ವಜನಿಕವಾಗಿ ಅದರ ವಿವರಗಳನ್ನು ಪ್ರಚುರಪಡಿಸಬೇಕೆಂಬ ಸಲಹೆಯನ್ನು ಗಂಭೀರವಾಗಿ ಪರಿಶೀಲಿಸಲಾಗುವುದು.**

6 ಇಷ್ಟಲ್ಲದೆ ಈಗಲೂ ತನಿಖೆಯಾಗುವುದಿದ್ದರೆ ಆಗಲಿ. ಆದರೆ ಬರೀ ತಾಂತ್ರಿಕ ದೃಷ್ಟಿಯಿಂದ ನೋಡಿದರೆ ತಪ್ಪು ಹುಡುಕುವುದು ಸುಲಭ. ಆದ್ದರಿಂದ ಅರಣ್ಯ ಕೃಷಿಯ ಬಗೆಗೂ ಬಲ್ಲ ಸಮರ್ಥರಿಂದ ತನಿಖೆಯಾದರೆ ಮಾತ್ರ ತಥ್ಯ ಹೊರಬರಲು ಸಾಧ್ಯ.

**ಈ ವಿಚಾರದಲ್ಲಿ ಶಾಸಕ ಶಾಮಣ್ಣನವರ ಸಂದರ್ಶನ ಪಡೆಯಲು ಯತ್ನಿಸಿದರೂ 3 ದಿನಗಳಲ್ಲೂ ಅವರು ವಿವಿಧೆಡೆ ಕಾರ್ಯಕ್ರಮಗಳಲ್ಲೇ ಬ್ಯುಸಿಯಾಗಿದ್ದುದರಿಂದ ಸಾಧ್ಯವಾಗಲಿಲ್ಲ. ....**

### ನಮ್ಮ ಅನಿಸಿಕೆ

ಈ ಪ್ರಶ್ನೆ ಇಷ್ಟೆಲ್ಲ ವಿವಾದದ ರೂಪ ಪಡೆಯುವುದಕ್ಕೆ ಒಂದೆರಡು ಕಾರಣಗಳು ನಮಗನ್ನಿಸುವುದೆಂದರೆ: ಮೊದಲಿಗೆ ಪ್ರಧಾನರಾಗಲಿ, ಶಾಸಕರಾಗಲಿ ಈ ಬಗ್ಗೆ ಪ್ರಶ್ನೆ ಎತ್ತಿದಾಗ, ಅರಣ್ಯ ಅಧಿಕಾರಿಗಳು ತಾಳ್ಮೆಯಿಂದ ಅವರಿಗೆ ಈ ಮೇಲಿನ ಎಲ್ಲ ವಿವರಣೆಗಳನ್ನು ಕೊಟ್ಟು ಅನುಮಾನ ಪರಿಹರಿಸುವ ಯತ್ನ ಮಾಡಿದ್ದು ಸಾಕಾಗಲಿಲ್ಲ. ಸಂಶಯಕ್ಕೆಡೆಕೊಡುವಂತೆ ನಡೆದುಕೊಂಡರು.

2ನೆಯದಾಗಿ, ಶಾಸಕರು ಕೂಡ ತೆರೆದ ಮನಸ್ಸಿನಿಂದ, ಅಂದರೆ ಅಕ್ರಮ ನಡೆದಿದೆಯೋ ಇಲ್ಲವೋ ಎಂಬ ಪರಿಶೀಲನೆಗಾಗಿ, ಈ ವಿಚಾರ ಕೈಗೆತ್ತಿಕೊಳ್ಳಲಿಲ್ಲ; ಅಕ್ರಮ ನಡೆದಿದೆ ಎಂಬ ತೀರ್ಮಾನದಿಂದಲೇ ಮುಂದುವರಿದರು—ಎನ್ನಿಸುತ್ತದೆ. ಅವರ ಪ್ರತಿನಿಧಿಯಾಗಿ ಡಿಎಫ್‌ಓ ಜೊತೆ ಹೋದ ಪ್ರಧಾನರಿಗೆ, ಡಿಎಫ್‌ಓ ಕೊಡುವ ಸ್ಪಷ್ಟನೆಗಳನ್ನು ತುಲನೆ ಮಾಡಿ ಗ್ರಹಿಸುವುದಕ್ಕಿಂತ ತಪ್ಪು ಹುಡುಕುವುದೇ ಪ್ರಮುಖವಾಗಿರುವುದು ಕಂಡು ಬರುತ್ತದೆ. ಈಗಲೂ, ಸಂಶಯಗಳಿಗೆಲ್ಲ ಸಮರ್ಪಕವಾದ ವಿವರಣೆ ಕೊಟ್ಟಾದ ಮೇಲೂ, ಹಿಂದಿನ ಹೇಳಿಕೆಗಳಿಗೇ ಜೋತು ಬಿದ್ದಿದ್ದಾರೆನ್ನಿಸುತ್ತದೆ.

### ಕೆಲವು ಪ್ರಶ್ನೆಗಳು

ಹೋಗಲಿ, ಶಾಸಕರಾದರೂ ರಾಜ್ಯ ಮಟ್ಟದ ಪತ್ರಿಕೆಯೊಂದರಲ್ಲಿ, ಅಷ್ಟು ದೊಡ್ಡ ಆಪಾದನೆ ಮಾಡುವ ಮೊದಲು ಡಿಎಫ್‌ಓ ಜೊತೆಗೊಮ್ಮೆ ಸ್ಥಳ ಪರಿಶೀಲನೆ, ಕೂಲಂಕಷ ಪರಾಮರ್ಶೆ ನಡೆಸುವುದು ಅಗತ್ಯವಿರಲಿಲ್ಲವೆ ? ಅಕ್ರಮ ನಡೆದಿರಬಹುದೆಂಬ ಶಂಕೆಗೂ, ಆ ರೀತಿಯ ಬಹಿರಂಗ ಆಪಾದನೆಗೂ ವ್ಯತ್ಯಾಸವಿಲ್ಲವೆ ?

ಇಂಥ ಜವಾಬ್ದಾರಿ ಸ್ಥಾನದಲ್ಲಿರುವವರು ಅಷ್ಟು ಗಂಭೀರ ಆರೋಪ ಹೊರಿಸುವ ಮೊದಲು ಪೂರ್ತಿ ಪರಾಮರ್ಶೆ ಮಾಡುವ ಜವಾಬ್ದಾರಿ ತೆಗೆದುಕೊಳ್ಳದಿದ್ದರೆ, ಅವರ ಆಪಾದನೆಗಳಿಗೂ ಹೇಳಿಕೆಗಳಿಗೂ ಬೆಲೆ ಮರ್ಯಾದೆ ಬರುವುದು ಹೇಗೆ ? ಹೀಗಾದಾಗಲೇ ಅಲ್ಲವೆ ಅವರ ಈ ಕ್ರಿಯೆಯ ಹಿಂದೆ ಸದುದ್ದೇಶಕ್ಕಿಂತ ದುರುದ್ದೇಶದ್ದೇ ಹೆಚ್ಚು ವಾಸನೆ ಹೊಡೆಯುವುದು ?

ಅವರೇ ನಿರ್ಧರಿಸಬೇಕು. ಅಂತೂ ಅನುಮಾನವಿದ್ದಲ್ಲಿ ತನಿಖೆಯಾಗುವುದು ಸ್ವಾಗತಾರ್ಹ.

# ಕ್ರೀಡಾಂಗಣದ ವಿರುದ್ಧ ಕ್ಷುಲ್ಲಕ ವಿವಾದ

ತೆಂಗಿನಮನೆ : ಇಲ್ಲಿನ ಸ್ಟಾರ್ ಸ್ಪೋರ್ಟ್ಸ್ ಅಸೋಸಿಯೇಶನ್ ಪರವಾಗಿ ಕಳಸಾಪುರ ಎಸ್ಟೇಟಿನ ಕುಲಾಸೋ ಕುಟುಂಬದವರು ಸುಮಾರು 60 ಸಾವಿರ ರೂ. ವೆಚ್ಚದಲ್ಲಿ ನಿರ್ಮಿಸಿರುವ 'ದಿ| ಎನ್. ಜೆ ಕುಲಾಸೊ ಸ್ಮಾರಕ ಸ್ಟಾರ್ ಕ್ರೀಡಾಂಗಣ'ದ ಬಗ್ಗೆ ಕ್ಷುಲ್ಲಕ ವಿವಾದವೊಂದನ್ನು ಹುಟ್ಟುಹಾಕಲಾಗಿದೆ.

ಬೆಳವಾಡಿಗೆ ಹೋಗುವ ರಸ್ತೆಯನ್ನು ಕ್ರೀಡಾಂಗಣ ಒಳಗೊಂಡಿದ್ದು, ಕ್ರೀಡಾಂಗಣದ ಪಕ್ಕದಲ್ಲೇ ಹೊಸ ಉತ್ತಮ ರಸ್ತೆಯೊಂದನ್ನೂ ನಿರ್ಮಿಸಿಕೊಟ್ಟಿದ್ದಾರೆ. ಆದರೂ ಮೊದಲಿದ್ದ ರಸ್ತೆಯೇ ಬೇಕೆಂದು ಬೆಳವಾಡಿ ಶಂಕರಾಚಾರಿ ಎಂಬ ವ್ಯಕ್ತಿಯೂ, ಕ್ರೀಡಾಂಗಣಕ್ಕೆ ಕುಲಾಸೊ ಹೆಸರನ್ನೇಕೆ ಇಡಬೇಕೆಂದು ಕೆಲ ಸಂಕುಚಿತ ಮನಸ್ಸಿನವರೂ ಮುಂದೆ ನಿಂತು ತೊಗಲು ಬೊಂಬೆಯಾಟ ಆಡುತ್ತಿದ್ದಾರೆ. ಸೂತ್ರ ಹಿಡಿದಿರುವ 'ಕೈ'ಯಲ್ಲಿ ಶಾಸಕರ ಪ್ರಾತಿನಿಧ್ಯವೂ ಇದೆಯೆಂದು ಖಚಿತವಾದ ಅಭಿಪ್ರಾಯವಿದೆ.

ಒಳಿತು–ಕೆಡುಕಿನ ನಡುವೆ, ಸಮಾಜಕ್ಕೆ ಹಿತಕರ ಮತ್ತು ಅಹಿತಕರ ಶಕ್ತಿಗಳ ನಡುವೆ ಸಮುದ್ರ ಮಥನ ಆರಂಭವಾಗಿದೆ.

## ಸುರೇಶ್ ನಾಯಕ್ ಪುನರಾಯ್ಕೆ

ಹಾಲ್ಮತ್ತೂರು : ಇಲ್ಲಿನ ಆಜಾದ್ ಯುವಕ ಸಂಘದ ಅಧ್ಯಕ್ಷರಾಗಿ ಚಾವಲ್ಮನೆ ಸುರೇಶ್ ನಾಯಕ್ ಪುನರಾಯ್ಕೆಯಾಗಿದ್ದಾರೆ. ಎಚ್. ಎಸ್. ಶ್ರೀನಿವಾಸ್ (ಉಪಾಧ್ಯಕ್ಷ), ಎಚ್ ಎಸ್. ಸತ್ಯನಾರಾಯಣ (ಕಾರ್ಯದರ್ಶಿ), ಎಚ್. ಡಿ. ಅಶೋಕ್ (ಸಹ ಕಾರ್ಯದರ್ಶಿ) ಮತ್ತು ಎಚ್. ಸಿ. ಶಿವಸ್ವಾಮಿ (ಖಜಾಂಚಿ).

### ರಥೋತ್ಸವ

ಕೊಪ್ಪ: ಸಮೀಪದ ಸಿದ್ಧೇಶ್ವರ ರಥ ಜಾತ್ರೆ ಮಾ 9ರಿಂದ 13ರವರೆಗೆ ನಡೆಯುವುದು. ಮಾ. 11ರ ಭಾನುವಾರ ಮಹಾರಥೋತ್ಸವವಿದ್ದು, ಭಾನುವಾರ, ಸೋಮವಾರ ನಾಟಕ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ

## ಅರಣ್ಯ ರಕ್ಷಕರ ಸಂಘದ ಕೊಪ್ಪ ಘಟಕಕ್ಕೆ ಆಯ್ಕೆ

ಕೊಪ್ಪ : ರಾಜ್ಯ ಅರಣ್ಯ ರಕ್ಷಕರ ಸಂಘದ ಕೊಪ್ಪ ವಿಭಾಗ ಶಾಖೆಯ ನೂತನ ಪದಾಧಿಕಾರಿಗಳು :

ಎಸ್.ಬಿ. ಮಂಜುನಾಥ್ (ಅಧ್ಯಕ್ಷರು), ಸಣ್ಣ ಸಿದ್ದಪ್ಪ (ಉಪಾಧ್ಯಕ್ಷರು), ಬೋ... ರಾಜ್ (ಕಾರ್ಯದರ್ಶಿ), ರಾಮನಾಯ... (ಸಹ ಕಾರ್ಯದರ್ಶಿ), ಎಚ್. ಲೇ... (ಖಜಾಂಚಿ), ಕೃಷ್ಣೇಗೌಡ, ಕೃಷ್ಣೇಗೌಡ, ಲಾರೆನ್ಸ್ ಡಿಸೋಜಾ, ... ನಾಯರ್, ನಾಗೇಶಗೌಡ, ಕೆಂಚೇಗೌಡ, ಆನಂದ್, ವೆಂಕಟರಾಮ (ಸದಸ್ಯರುಗಳು)



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ.